ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೨ ಅಕ್ಟೋಬರ್ ೨೦೦೬ ಸಂಚಿಕೆ ೧೦




ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಬೋಧಕ ಮತ್ತು ಬೋಧಕೇತರ ನೌಕರರ ಸಂಘದ ಸಂಯುಕ್ತ ಆಶ್ರಯದಲ್ಲಿ ಅಕ್ಟೋಬರ್ ಎರಡು ಶ್ರೀ ಬಸವ ಜಯಂತಿ ಮತ್ತು ಗುರುವಂದನ ಮಹೋತ್ಸವ ಪರಮ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ವೇದಿಕೆಯಲ್ಲಿ ಶ್ರೀಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಪ್ರೊ॥ ಬಸವರಾಜಯ್ಯ, ಪ್ರೊ॥ ಎಂ. ಕೃಷ್ಣೇಗೌಡ, ಬೆಂಗಳೂರು ದೂರದರ್ಶನ ಕೇಂದ್ರದ ನಿರ್ದೇಶಕರಾದ ಶ್ರೀ ಮಹೇಶ್ ಜೋಷಿ, ಕೀರ್ತನಾ ಕೇಸರಿ ಕಲ್ಲಿನಾಥ ಶಾಸ್ತ್ರಿಗಳು, ಡಾ॥ ಎಂ.ಎಸ್. ಚನ್ನಬಸಪ್ಪ ಅವರು ಉಪಸ್ಥಿತರಿದ್ದರು.



ತುಮಕೂರಿನಲ್ಲಿ ನಡೆದ ಅಖಿಲ ಕರ್ನಾಟಕ ೪ನೇ ಹಸ್ತಪ್ರತಿ ಸಮ್ಮೇಳನವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪ್ರೊ॥ ಅನಂತರಾಮಯ್ಯ, ಪ್ರೊ॥ ಎಸ್.ಜಿ. ಸಿದ್ಧರಾಮಯ್ಯ, ಪ್ರೊ॥ ಸಣ್ಣಯ್ಯ, ಪ್ರೊ॥ ಸಿ. ಮಹದೇವಪ್ಪ ಡಾ॥ ಎಫ್.ಟಿ. ಹಳ್ಳಿಕೇರಿ ಹಾಗೂ ಶ್ರೀ ಟಿ.ಕೆ. ನಂಜುಂಡಪ್ಪ ಉಪಸ್ಥಿತರಿದ್ದರು.



ಹಸ್ತಪ್ರತಿ ಸಮ್ಮೇಳನದ ಮುಕ್ತಾಯ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿ ಆಶೀರ್ವಚನ ನೀಡಿದರು. ವೇದಿಕೆಯಲ್ಲಿ ಡಾ॥ ಎಫ್.ಟಿ. ಹಳ್ಳಿಕೇರಿ, ಶ್ರೀ ಟಿ.ಕೆ. ನಂಜುಂಡಪ್ಪ, ಪ್ರೊ॥ ಸಿ. ಮಹದೇವಪ್ಪ, ಶ್ರೀ ಸಣ್ಣಯ್ಯ, ಡಾ॥ ಎಂ.ಆರ್. ಹುಲಿನಾಯ್ಕರ್, ಶ್ರೀ ಮಂಜುನಾಥ ಅಡಿಗ ಹಾಗೂ ಶ್ರೀ ಟಿ.ಎಸ್. ಸಚ್ಚಿದಾನಂದಮೂರ್ತಿ ಅವರು ಉಪಸ್ಥಿತರಿದ್ದರು.

 ಅಂತರಂಗ 

ಸಂಪಾದಕ :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕ :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕ :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ**
**ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು",**
**'ಸಿದ್ಧಗಂಗಾ' ಮಾಸಪತ್ರಿಕೆ'**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೨ ಅಕ್ಟೋಬರ್ ೨೦೦೬ ಸಂಚಿಕೆ : ೧೦

ಒಳಪುಟಗಳಲ್ಲಿ ......................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೦೦/- ಆಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಬಣ್ಣದ ಮಡಕೆಯ ಹೊತ್ತಾಡುವ ಹೆಣ್ಣಿಗೆ*
*ಮೈಯೆಲ್ಲಾ ಮುಳ್ಳು ಮುಖವೀರೈದು*
*ಬಣ್ಣದ ಮಡಕೆಯ ನೊಡೆದು*
*ಹೆಣ್ಣಿನ ಮೈಯ ಮುಳ್ಳನ್ನೆಲ್ಲಾ ಮುರಿದು*
*ಮುಖವೀರೈದ ಕೆಡಿಸಿದ ನಿರ್ಮಲ ನಿರಾವರಣ ಶರಣನು*
*ಆ ಶರಣಂಗೆ ನಮೋ ನಮೋ ಎಂಬೆನು ಕಾಣಾ*
*ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೆ.*

ಪ್ರಪಂಚಿನ ರಚನೆಯುಳ್ಳ ದೇಹಭಾವವೆಂಬ ಘಟವನು ಅಜ್ಞಾನವೆಂಬ ಶಿರಸ್ಸಿನಲ್ಲಿ ತಳೆದು ಇಹಪರ ಲೋಕಂಗಳಿಗೆಡೆಯಾಡುವ ಅವಿದ್ಯಾಶಕ್ತಿಗೆ ಸರ್ವಾಂಗ ವೆಲ್ಲವು ವಿಷಯಕಂಠಕ ರೂಪಾಗಿ ದಶೇಂದ್ರಿಯಂಗಳೇ ವದನಗಳಾಗಿ ಒಪ್ಪುತ್ತಿಹವು ಅಂತಪ್ಪ ದೇಹ ಭಾವವನು ಮಂತ್ರಲಿಂಗ ಸಂಬಂಧದಿಂದೇ ನಿವೃತ್ತಿಯ ಮಾಡಿ ಅವಿದ್ಯಾಶಕ್ತಿಯ ದೇಹ ಸಂಬಂಧವಾದ ವಿಷಯ ಕಂಠಕಂಗಳ ನಿವೃತ್ತಿಯ ನೈದಿಷಿ ದಶೇಂದ್ರಿಯಂಗಳ ವರ್ತನೆಯನು ಲಿಂಗ ಸ್ಮರಣೆಯಿಂದ ನಷ್ಟವ ಮಾಡಿ ಮಲತ್ರಯರಾಹಿತ್ಯದಿಂದೆ ನಿರ್ಮಾಯ ಆವರಣನಾದ ಶರಣಂಗೆ ನಮೋ ನಮೊ ಎಂಬೆನು ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾ ಮೃತದ ಬೆಡಗಿನ ವಚನದ ಟೀಕೆ. – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ನುಡಿಯ ನಡೆಯಾಗಿಸಿಹ ನಡೆಯ ನುಡಿಯಾಗಿಸಿಹ
ನಡೆ ನುಡಿಯ ಒಡಗೂಡಿಸಿ ನಡೆದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕಾನುಭಾವದ ಶಿವಭಾನು ಶುಭಚರಿತ
ದೇವಮಾನವರೂಪ ಭುವಿಭಾಗ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆನೆ ನೆನೆದು ಸುಖಿಯಾದೆ ಕಂಡು ಧನ್ಯನಾದೆ
ಅನುಗಾಲ ಒಡನಿದ್ದು ಕುಡಿವರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನೆವ ಮನವನೆವೆಂದುಪಮಿಸಲಿ
ನಿಂಬ ಕಾಂಬ ಕಣ್ಣ ಪುಣ್ಯವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಸಾರ ಸಾಗರದಿ ಮುಳುಗಿ ಹೋಗದ ತೆರದಿ
ವಿಶ್ವ ಸಂಸಾರಿಯೆ ಕರುಣಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನಾವರ್ಣದ ಬದುಕ ನಂಬಿ ನಡೆದಿಹ ಎನ್ನ
ಕಡೆತನಕ ಕೈ ಹಿಡಿದು ನಡೆಸೆನ್ನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನಿತ್ತಳೆವೆನು ನೀವತ್ತ ಸೆಳೆವಿರಿ
ನಾನು ಕಳೆದು ಹೋಗದಿರುವಂತೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೀರದ ಘನವೆಂಬೆ ಸಾರಿದ ನಿಜವೆಂಬೆ
ಆರೂ ಕಾಣದ ನಿಲವೆಂಬೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೀರವಿರಕ್ತ ವಿಭುವೆ ವಿಶ್ವ ಸಂಸಾರಿಯೆ
ನೆಲದಾಯಿ ಹಡೆದ ತವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದವ ನರಿತಿರುವೆ ಶಾಸ್ತ್ರವ ಕಂಡಿರುವೆ
ಆಗಮ ಸ್ಮೃತಿಗಳ ನರಿತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಆತ್ಮಾವಲೋಕನ

*ಜೀವನದುದ್ದಕ್ಕೂ ಸಾವಿರ ಸಾವಿರ ದೃಶ್ಯಗಳನ್ನು ನೋಡುತ್ತೇವೆ, ಕೇಳುತ್ತೇವೆ, ಅನೇಕ ಪುರಾಣ ಪುಣ್ಯ ಕಥೆ ವಿಚಾರಗೋಷ್ಠಿ ಸಮಾರಂಭಗಳಲ್ಲಿ ಭಾಗವಹಿಸುತ್ತೇವೆ. ಗ್ರಂಥಾವಲೋಕನ ಮಾಡುತ್ತೇವೆ. ಜ್ಞಾನಿಗಳೊಂದಿಗೆ ತಜ್ಞರೊಡನೆ ಹಿರಿಯರೊಡನೆ ಲೋಕಾನುಭವಿಗಳೊಂದಿಗೆ ಧರ್ಮ ಪ್ರಭುಗಳ ಜೊತೆ ಚರ್ಚೆಯಲ್ಲಿ ಸಂವಾದದಲ್ಲಿ ಸಮಾಲೋಚನೆಯಲ್ಲಿ ತೊಡಗುತ್ತೇವೆ. ಈ ಎಲ್ಲ ಸಂದರ್ಭಗಳಲ್ಲಿಯೂ ನಮ್ಮ ಮನಸ್ಸು ವ್ಯವಹರಿಸುತ್ತದೆ. ಹಿಂದೆ ನಾವು ಮಾಡಿದ ಪಾಪ ಪುಣ್ಯಗಳ ಹಿತ ಅಹಿತಗಳ ಸುಖದುಃಖಗಳನ್ನು ಮೆಲುಕು ಹಾಕುತ್ತದೆ. ಆ ಸಂದರ್ಭಗಳಲ್ಲಿ ಹೊಸ ಬೆಳಕಿನಲ್ಲಿ ನಾವು ಉಳಿದದ್ದೆಷ್ಟು ಕಳೆದು ಹೋದದ್ದೆಷ್ಟು ಎಂಬ ಅವಲೋಕನ ಮಾಡುತ್ತೇವೆಯೋ? ಮೊನ್ನೆ ಒಬ್ಬ ವಿದ್ವಾಂಸರು ಸಮಾರಂಭ ಒಂದರಲ್ಲಿ ಮಾತನಾಡುತ್ತಾ ಮಹಾನುಭಾವರ ಜೀವನಾದರ್ಶಗಳನ್ನು ಕೇವಲ ಗಿಳಿಯೋದಿದಂತೆ ಓದಿದರೆ ಬರುವ ಭಾಗ್ಯವಾದರೂ ಏನು? ಆ ಆದರ್ಶಗಳು ನಮ್ಮ ಬಾಳಿನಲ್ಲಿ ಆಚರಣೆಗೆ ಬಾರದೆ ಹೋದರೆ ಇಂತಹ ಸಮಾರಂಭಗಳು ನಿಷ್ಪ್ರಯೋಜಕವಾಗುತ್ತವೆಯಲ್ಲವೇ? ಎಂದು ನುಡಿಯುತ್ತ ಆತ್ಮಾವಲೋಕನ ಬಾಳಿನ ನಂದಾದೀಪವಾಗಬೇಕು. ನಮ್ಮ ನಡೆ ನಮ್ಮ ನುಡಿ ನಮ್ಮ ಜ್ಞಾನಾರ್ಜನೆ ನಮ್ಮ ಆಚರಣೆಗಳು ದಿನದಿಂದ ದಿನಕ್ಕೆ ಕತ್ತಲಿನಿಂದ ಬೆಳಕಿನಡೆಗೆ ನಡೆಯುವಂತಾಗಬೇಕು ಎಂದು ವಿಶ್ಲೇಷಿಸಿದರು. ಇತಿಹಾಸದ ಪುಟಗಳನ್ನು ತಿರುವಿದಾಗ ಈ ಆತ್ಮಾವಲೋಕನದ ಅಭಾವದಿಂದಲೇ ಮನುಕುಲ ತತ್ತರಿಸಿ ಹೋಗಿರುವುದನ್ನು ವಿಚಾರವಂತರು ಅರಿಯಬಹುದು. ನಾವು ಕೇವಲ ಬುದ್ಧ ಬಸವ ಗಾಂಧೀಜಿ ಶರಣರು ಸಂತರು ದಾಸರು ಸಾಧುಗಳನ್ನು ಸ್ಮರಿಸಿದರೆ ಸಾಲದು. ಅವರ ಜಯಂತಿಗಳನ್ನು ಆಚರಿಸಿದರೆ ಸಾಲದು ಆ ಸ್ಮರಣೆ ಆ ಜಯಂತಿಗಳು ನಮ್ಮನ್ನು ಆ ಮಹಾನುಭಾವರು ನಡೆದ ಗುರುಪಥದಲ್ಲಿ ನಡೆಸುವಂತಾಗಬೇಕು. ಆತ್ಮ ತತ್ವವನ್ನು ಅರಿಯಲು ನಮ್ಮೆಲ್ಲ ಆಚರಣೆಗಳು ಸಹಕರಿಸಬೇಕು. ಬಿಡು ಕೆಟ್ಟದ್ದನ್ನು ಹಿಡಿ ಒಳ್ಳೆಯದನ್ನು ಎನ್ನುವಂತಾದಾಗ ನಾವು ಮಾಡುವ ಆಚರಣೆಗಳಿಗೆ ಅರ್ಥ ಬಂದೀತು.*

*

# ಕನ್ನಡ ನುಡಿ, ಗಡಿ ಜಾಥಾ

ನಾಡಿನ ಉದ್ದಗಲದಲ್ಲಿ ಎಲ್ಲ ಗಡಿ ತಾಲ್ಲೂಕುಗಳಲ್ಲಿ ನುಡಿ, ಗಡಿ, ಜಾಥಾ ಸಂಚರಿಸುತ್ತಿದೆ. ಕನ್ನಡಿಗರಲ್ಲಿ ನುಡಿಯ ಬಗ್ಗೆ, ಗಡಿಯ ಬಗ್ಗೆ ನವಜಾಗ್ರತಿಯನ್ನುಂಟುಮಾಡಲು ಕಟಿಬದ್ಧವಾಗಿ ಮುನ್ನಡೆದಿದೆ. ನುಡಿ ಎಂಬುದು ಸ್ವಾಭಿಮಾನದ ಸಂಕೇತ. ಗಡಿಯ ಎಂಬುದು ನಾಡಿನ ಎಲ್ಲೆ ಕಟ್ಟಿನ ಬಗ್ಗೆ ನಮಗಿರಬೇಕಾದ ಎಚ್ಚರ. ಸಾಮಾನ್ಯವಾಗಿ ಗಡಿ ಪ್ರದೇಶದ ಜನತೆ ದ್ವಿಭಾಷಿಕರಾಗಿರುವುದು ಸಹಜ, ಸ್ವಾಭಾವಿಕ. ಆದರೆ ತಮ್ಮ ನುಡಿಯ ಬಗ್ಗೆ ಅವರಿಗಿರಬೇಕಾದ ಅಭಿಮಾನ ದೊಡ್ಡದು. ಕನ್ನಡಿಗರು ಪ್ರಾಚೀನ ಕಾಲದಿಂದಲೂ ನೆರೆ ರಾಜ್ಯಗಳೊಂದಿಗೆ ಸ್ನೇಹ ವಿಶ್ವಾಸಗಳನ್ನು ಬೆಳೆಸಿಕೊಂಡು ಬಂದವರೇ ಆಗಿದ್ದಾರೆ. ಯಾರೊಂದಿಗೂ ಅಕಾರಣವಾಗಿ ಜಗಳ, ತಂಟೆ ತಕರಾರುಗಳಿಗೆ ಮುಂದಾದವರಲ್ಲ. ಆದರೆ ಇತ್ತಿಚಿನ ದಿನಗಳಲ್ಲಿ ಗಡಿ ಭಾಗದಲ್ಲಿರುವ ಕನ್ನಡಿಗರು ಎದುರಿಸುತ್ತಿರುವ ಸಮಸ್ಯೆಗಳು ಒಂದೆರಡಲ್ಲ. ಸರ್ಕಾರದ ನಿರ್ಲಕ್ಷ್ಯ ಒಂದು ಕಡೆಯಾದರೆ ನೆರೆ ರಾಜ್ಯದವರ ದೌರ್ಜನ್ಯ, ದಬ್ಬಾಳಿಕೆಗಳು ಮತ್ತೊಂದು ಕಡೆ. ಅವರನ್ನು ಸದಾ ಕಾಲ ಕಿತ್ತು ತಿನ್ನುತ್ತಿರುವ ಸಮಸ್ಯೆಗಳಾಗಿವೆ. ಬೆಳಗಾವಿ ಮಹಾಜನ ಆಯೋಗದಂತೆ ಕರ್ನಾಟಕಕ್ಕೆ ಸೇರಿಹೋಗಿರುವುದಾಗಿದೆ. ಆದರೆ ಮಹಾರಾಷ್ಟ್ರದವರು ಮೇಲಿಂದ ಮೇಲೆ ತಕರಾರು ಮಾಡುತ್ತಿರುವುದು ಹೊಸದೇನೂ ಅಲ್ಲದಾಗಿದೆ. ಈ ಸಂದರ್ಭದಲ್ಲಿ ಕೇಂದ್ರ ಸರ್ಕಾರ ಸರಿಯಾದ ಸರ್ವಸೂಕ್ತವೆನಿಸಬಹುದಾದ ತೀರ್ಮಾನವನ್ನು ತೆಗೆದುಕೊಳ್ಳಬೇಕಾಗಿದೆ. ನಾಡು ಮತ್ತು ನುಡಿಯನ್ನು ಗೌರವಿಸದ ಜನತೆ ಸ್ವಾಭಿಮಾನ ಶೂನ್ಯರೆನಿಸುತ್ತಾರೆ. ನಮ್ಮ ಹಿರಿಯರು ದೂರದೃಷ್ಟಿಯುಳ್ಳವರು. ಒಂದೇ ಭಾಷೆಯನ್ನಾಡುವ ಜನ ಒಂದು ಭೌಗೋಳಿಕ ವಲಯದಲ್ಲಿ ಸುವ್ಯವಸ್ಥಿತವಾಗಿ ಜೀವಿಸಲು ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಭಾಷಾವಾರು ಪ್ರಾಂತ್ಯಗಳನ್ನು ರಚಿಸಿದರು. ಆ ದೃಷ್ಟಿಯಿಂದ ನೋಡಿದಾಗ ಕನ್ನಡ ನಾಡಿಗೆ ಸೇರಬೇಕಾದ ಇನ್ನೂ ಈ ನಾಡಿನ ಕೆಲವು ಪ್ರದೇಶಗಳು ಸೇರಿಲ್ಲ ವಾಗಿದೆ. ಇಂತ ಸಂದರ್ಭಗಳಲ್ಲಿ ಜಾಗೃತಿ ಜಾಥಾ ಕೈಗೊಂಡಿರುವ ಅಭಿಮಾನದ ಯಾತ್ರೆ ಶ್ಲಾಘನೀಯವಾದುದು. ಕನ್ನಡಿಗರಲ್ಲಿ ಹೊಸ ಚೈತನ್ಯವನ್ನು ಹೊಸ ಜಾಗೃತಿಯನ್ನು ಮೂಡಿಸುವಂಥದು. ಮಲಗಿದವರನ್ನು ಏಳಿಸುವಂಥಹುದು. ಕನ್ನಡಕ್ಕಾಗಿ ಏನೆಲ್ಲವನ್ನೂ ತ್ಯಾಗ ಮಾಡಿದ ಅದೆಷ್ಟೋ ಪುಣ್ಯ ಜೀವಿಗಳು ಸ್ಮರಣೀಯರಾಗಿದ್ದಾರೆ. ಹೊರದೇಶಗಳಲ್ಲಿರುವ ಜನ ಕನ್ನಡ ಪ್ರೇಮವನ್ನು ಹೆಚ್ಚಿಸಿಕೊಳ್ಳುತ್ತಿರುವ ಈ ದಿನಗಳಲ್ಲಿ ಕನ್ನಡಿಗರೇ ತಮ್ಮ ಕಂದಮ್ಮಗಳಿಗೆ 1ನೇ ತರಗತಿಯಿಂದಲೇ ಇಂಗ್ಲೀಷನ್ನು ಕಲಿಯಬೇಕು ಎಂಬ ವಾದವನ್ನಿಲ್ಲಿ ಮುಂದಿಟ್ಟು ಸರ್ಕಾರ ಆ ಸಂಬಂಧವಾಗಿ ನಿರ್ಧಾರವನ್ನು ಕೈಗೊಳ್ಳುವಂತೆ ಮಾಡಿರುವುದು ವಿಪರ್ಯಾಸವಲ್ಲದೇ ಮತ್ತೇನು? ಜೊತೆಗೆ ಇಂಗ್ಲೀಷ್ ಮಾಧ್ಯಮದಲ್ಲಿ ಕನ್ನಡ ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡಬೇಕು, ವಿಶ್ವಪ್ರಜೆಗಳಾಗಿಸಬೇಕು ಎಂಬ ಭ್ರಮೆಯ ಮಾತುಗಳಿಗೆ ಏನನ್ನಬೇಕು? ೫, ೬ ವರ್ಷದ ಮಗು ಏಕಕಾಲಕ್ಕೆ ಎರಡು ಭಾಷೆಗಳನ್ನು ಕಲಿಯುವುದಾದರೂ ಎಂತು? ಕೇವಲ ನಗರದ ಮಕ್ಕಳನ್ನು ಕಣ್ಮುಂದಿಟ್ಟುಕೊಂಡು ನಿರ್ಧರಿಸಿದರೆ ಹೇಗೆ? ಗ್ರಾಮೀಣ ಪರಿಸರಗಳಲ್ಲಿ, ಕುಗ್ರಾಮಗಳಲ್ಲಿ ಬೆಳೆಯುತ್ತಿರುವ ಮಕ್ಕಳು ಏನಾಗಬೇಕು? ನುಡಿ ಸೂಕ್ತ ಮನಸ್ಸಿನಲ್ಲಿಯೂ ಕ್ರಿಯಾಶೀಲವಾಗಿರುವಂಥಹದು. ಅದರಲ್ಲಿಯು ತಾಯಿ ನುಡಿ ಎಲ್ಲಾ ವ್ಯವಸ್ಥೆಗಳಲ್ಲಿ ಕ್ರಿಯಾಮುಖವಾಗಿರುತ್ತದೆ. ಚಿಂತನ ಶಕ್ತಿಯನ್ನು ಬೆಳೆಸಿರುತ್ತದೆ. ಗಡಿನಾಡಿನ ಬಂಧುಗಳ ಬದುಕನ್ನು ಉತ್ತಮಗೊಳಿಸುವ ವ್ಯವಸ್ಥೆಯಾಗಬೇಕು. ಶಿಕ್ಷಣ ವ್ಯವಸ್ಥೆ, ಗ್ರಂಥಾಲಯ ವ್ಯವಸ್ಥೆ, ಸಾರಿಗೆ ವ್ಯವಸ್ಥೆ, ಮುಂತಾದ ಜೀವನ ಸೌಕರ್ಯಗಳು ಅವರಿಗೆ ಲಭ್ಯವಾಗಬೇಕು. ಕರ್ನಾಟಕವೆಂದರೆ ಬರೀ ಬೆಂಗಳೂರೇ ಅಲ್ಲ ಎಂಬ ಅರಿವು ನಮ್ಮ ಸರ್ಕಾರಕ್ಕಿರಬೇಕು. ಬೆಳಗಾವಿಯ ಗಡಿ ಭಾಗದ ಕಾಸರಗೋಡಿನ ಅಕ್ಕಲಕೋಟೆಯ ನಿಪ್ಪಾಣಿಯ , ತಾಳವಾಡಿ, ಮಡಕಸಿರಾ ಗಡಿಭಾಗದಲ್ಲಿರುವ ಹಳ್ಳಿಗಳೂ ಕರ್ನಾಟಕದ ಅವಿಭಾಜ್ಯ ಭಾಗಗಳೆಂದು ಗಮನಕ್ಕೆ ತೆಗೆದುಕೊಂಡು ಅವುಗಳ ಅಭಿವೃದ್ಧಿಯತ್ತ ಪ್ರಥಮ ಆದ್ಯತೆ ಕೊಡಬೇಕು. ಈಗ ಕೊಟ್ಟಿಲ್ಲವೆಂದಲ್ಲ. ಆದರೆ ಇನ್ನೂ ಕೊಡಬೇಕಾದುದು ಹೆಚ್ಚಿದೆ. ಇತ್ತೀಚಿಗೆ ಸರ್ಕಾರ ಇತ್ತ ಹೆಜ್ಜೆ ಇಟ್ಟಿರುವುದು ಸಂತೋಷದ ವಿಷಯ. ಬೆಳಗಾವಿಯಲ್ಲಿ ವಿಧಾನ ಸಭೆಯ, ವಿಧಾನ ಪರಿಷತ್ತಿನ ಅಧಿವೇಶನ ನಡೆಸುವುದುದ ಮೂಲಕ ಆ ನಿಟ್ಟಿನಲ್ಲಿ ಮುನ್ನಡೆದಿರುವುದು ಅಭಿನಂದನೀಯ.

ನುಡಿ ಗಡಿಗಳ ಜಾಥಾ ಬುದ್ಧಿ ಜೀವಿಗಳ ಕನ್ನಡಾಭಿಮಾನಿಗಳ ಒಕ್ಕೂಟದಲ್ಲಿ ರಾಜ್ಯದ ಎಲ್ಲ ಕಡೆಯಲ್ಲಿ ಸಂಚರಿಸುತ್ತಿದ್ದು. ಎಲ್ಲೆಡೆಯಲ್ಲೂ ಸಕ್ರೀಯಾತ್ಮಕ ಸ್ವಾಗತ ವ್ಯಕ್ತವಾಗುತ್ತಿರುವುದು ಹೆಮ್ಮೆಯ ವಿಚಾರ. ಯುವ ಜನತೆ ಅಭಿಮಾನದಿಂದ ಜಾಥಾ ಯಶಸ್ವಿಯಾಗಲು ಸಹಕರಿಸುವುದು ಕರ್ತವ್ಯವೆಂದು 'ಸಿದ್ಧಗಂಗಾ' ಆಶಿಸುತ್ತದೆ.

ಈ ಸಂದರ್ಭದಲ್ಲಿ ಸಿದ್ಧಗಂಗಾ ಮಠದ ಕನ್ನಡಾಭಿಮಾನದ ಒಂದು ಜ್ವಲಂತ ಉದಾಹರಣೆಯನ್ನು ಓದುಗರ ಅವಗಾಹನೆಗೆ ತರಲು ಇಚ್ಛಿಸುತ್ತದೆ. ಸರ್ಕಾರವು ನಡೆಸುತ್ತಿದ್ದ ಕನ್ನಡ ಪಂಡಿತ ಶಿಕ್ಷಣ ಸಂಸ್ಥೆಗಳನ್ನು ಮುಚ್ಚಿದರೂ ಶ್ರೀಮಠ ಮಾತ್ರ ಇಡೀ ರಾಜ್ಯದಲ್ಲಿ ಕನ್ನಡ ಪಂಡಿತ ಶಿಕ್ಷಣ ಸಂಸ್ಥೆಯನ್ನು ಮುಂದುವರೆಸಿಕೊಂಡು ಬರುತ್ತಿರುವುದು ದೂರದೃಷ್ಟಿಯುತವಾಗಿದೆ ಎಂಬುದನ್ನು ಇಲ್ಲಿ ಹೇಳಲಿಚ್ಛಿಸುತ್ತದೆ.

– ಸಂಪಾದಕ





# ಹೊನ್ನದೀವಳಿಗೆ ಮರಿಬ್ಯಾಡ .....

– ಎಚ್.ಎಸ್. ಸಿದ್ಧಗಂಗಪ್ಪ, ನಂ.೫೩/೧, ಶಿವಕೃಪ, ೩ನೇ ಅಡ್ಡರಸ್ತೆ, ಕಾವೇರಿ ಬಡಾವಣೆ, ವಿಜಯನಗರ, ಬೆಂಗಳೂರು.

ದೀಪಗಳ ಹಬ್ಬ ದೀಪಾವಳಿ. ಕತ್ತಲೆಯಿಂದ ಬೆಳಕಿನಡೆಗೆ, ಅಜ್ಞಾನದಿಂದ ಸುಜ್ಞಾನದೆಡೆಗೆ ಹೋಗುವ ದಿವ್ಯ ಸಂದೇಶವನ್ನು ನೀಡುವ ಹಬ್ಬ. ಜ್ಞಾನ ಜ್ಯೋತಿಯನ್ನು ಬೆಳಗಿಸಿ ಮನದ ಕತ್ತಲೆಯನ್ನು ಕಳೆಯುವ ಹಬ್ಬ. ಇದನ್ನು ದೀವಳಿಗೆ, ಹಟ್ಟಿ ಹಬ್ಬ, ನೀರು ತುಂಬುವ ಹಬ್ಬ ಎಂದು ಕರೆಯುವುದುಂಟು. ದೇಶದ ಬಹುತೇಕ ಕಡೆಗಳಲ್ಲಿ ಸಂತೋಷ, ಸಂಭ್ರಮ, ಉತ್ಸಾಹ, ಉಲ್ಲಾಸದಿಂದ ಆಚರಿಸುವ ಹಬ್ಬ ದೀಪಾವಳಿ, ನಮ್ಮ ಗ್ರಾಮೀಣರಿಗೆ ಜೀವನೋತ್ಸಾಹವನ್ನು ನೆಮ್ಮದಿ ಸಂತೋಷವನ್ನು ತಂದು ಕೊಡುವ ಹಬ್ಬ. ಕಣ್ಣಾಯಿಸಿದಷ್ಟು ಕಾಣುವ ಹಚ್ಚ ಹಸಿರಿನಿಂದ ಕೂಡಿದ ಬೆಳೆ. ಕೆರೆ ಕಟ್ಟೆಗಳಲ್ಲಿ ತುಂಬಿ ಹರಿಯುವ ನೀರು ನೋಡಲು ಮನಮೋಹಕ. ಈ ಪ್ರಕೃತಿ ಸೌಂದರ್ಯದ ಹಿನ್ನಲೆಯಲ್ಲಿ ದೀಪಾವಳಿಯನ್ನು ದೇವೇಂದ್ರನ ವೈಭೋಗಕ್ಕೆ ಹೋಲಿಸಿ, ಭೂಲೋಕಕ್ಕೂ ಇಂದ್ರನ ಅಮರಾವತಿಗೂ ಇರುವ ಸಾದೃಶ್ಯವನ್ನು ಅಭಿವ್ಯಕ್ತಿಗೊಳಿಸಿದ್ದಾರೆ.

*ಹೊಳೆಯಲ್ಲಿ ನೀರು ತುಂಬಿ, ಹೊಲದಲ್ಲಿ ಬೆಳೆ ತುಂಬಿ*
*ಊರೂರಿನ ಗುಡಿ ಮನೆ ತುಂಬಿ-ಜನತುಂಬಿ*
*ದೀವಳಿಗೆ ಬರಲಿ ದಿನ ಬರಲಿ*

ಎಂದು ದೀವಳಿಗೆಯ ಆಗಮನವನ್ನು ಹೃದಯ ತುಂಬಿ ಸ್ವಾಗತಿಸುತ್ತಾರೆ.

ಪಾಂಡವರು ತಮ್ಮ ಅಜ್ಞಾತವಾಸ ಮುಗಿಸಿ 'ವಿಜಯ ದಶಮಿ'ಯಾದ ನಂತರ ದಕ್ಷಿಣ ಭಾರತವನ್ನು ಬಿಟ್ಟು ಉತರಕ್ಕೆ ಹಸ್ತಿನಾವತಿಯನ್ನು ಸೇರುವುರೆಂದು ಪೌರಾಣಿಕತೆಯಿಂದ ತಿಳಿದು ಬರುತ್ತದೆ. ಈ ಘಟನೆಯನ್ನು ನೆನಪಿಸಿಕೊಳ್ಳುವ ದೃಷ್ಟಿಯಿಂದ ನಮ್ಮ ಜನಪದರು ಪ್ರತಿಪದೆಯ ದಿವಸ ಗೋಸಗಣಿಯಿಂದ ಪಾಂಡವರನ್ನು ಕಲ್ಪಿಸಿಕೊಳ್ಳುತ್ತಾರೆ. ಎಲ್ಲಿ ಎಲ್ಲಿ ನೋಡಿದರೂ ಪಾಂಡವರ ಹೆಜ್ಜೆಯ ಗುರುಗಳೇ, ಈ ಸಂದರ್ಭವನ್ನು ತಮ್ಮದೇ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

*ಹಾಸುಗಲ್ಲಿನ ಮೇಲೆ ಹಾದು ಹೋದವರ್ಯಾರ*
*ಪಾದ ಮೂಡ್ಯಾವ ಪರಿಪರಿ-ಪಾಂಡೂರ*
*ಹಾದು ಹೋಗ್ಯಾರ ಜಳಕಕೆ*

ಎಂದಿದ್ದಾರೆ. ಪಾಂಡವರು ಊರು ಸೇರಿದ ಮೇಲೆ ಹಾಯ್ದುಹೋಗಲು ಪರಿಪರಿಯಾಗಿ ಹೆಜ್ಜೆಗಳು ಮೂಡಿದವು. ಈ ಸಂದರ್ಭವನ್ನು ಸ್ಮರಿಸಿಕೊಳ್ಳಲು ಮತ್ತು ರೈತರು ತಮ್ಮ ಮನೆ ಹಟ್ಟಿಯ ತುಂಬೆಲ್ಲ ಹೆಜ್ಜೆಗಳನ್ನು ಮೂಡಿಸುವ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದಾರೆ.

ಮತ್ತೊಂದು ಕಥೆಯ ಪ್ರಕಾರ ಪಾಂಡವರು ತಮ್ಮ ಒಂದು ವರುಷದ ಅಜ್ಞಾತವಾಸ ಮುಗಿಸಿ ಕೌರವರಿಂದ ಒಯ್ಯಲ್ಪಟ್ಟ ಗೋವುಗಳನ್ನು ಗೆದ್ದು ಅಂದೇ ಎಲ್ಲರೂ ವಿರಾಟ ರಾಜನಲ್ಲಿ ಕಾಣಿಸಿಕೊಂಡ ಐಕ್ಯತೆಯ ಸಂಕೇತಕ್ಕಾಗಿ 'ಪಾಂಡವರು' ಎಂದು ಸಗಣಿಯನ್ನಿಟ್ಟು ಪೂಜಿಸುವರು. ಈ ಕಾರಣದಿಂದ ದೀಪಾವಳಿ ಹಬ್ಬದ ಸಂದರ್ಭದಲ್ಲಿ ದನಗಳು-ದನ ಕೊಟ್ಟಿಗೆ ಮೊದಲಾದವನ್ನು ಭಕ್ತಿಯಿಂದ ಪೂಜಿಸುವ ಸಂಪ್ರದಾಯ ಶತಶತಮಾನಗಳಿಂದ ನಡೆಸಿ ಕೊಂಡು ಬಂದಿದ್ದಾರೆ.

ದಂತ ಕಥೆಯೊಂದರ ಪ್ರಕಾರ ಹಿಂದೆ ಹೈಮ ಎಂಬ ಅರಸನಿಗೆ ಒಬ್ಬ ಮಗನಿದ್ದ. ಮಗನ ಮದುವೆಯಾದ ನಾಲ್ಕನೇ ದಿನವೇ ಸರ್ಪದೋಷದಿಂದ ಆತನು ಮರಣ ಹೊಂದಿದ. ಆತನ ಹೆಂಡತಿ ಗಂಡನ ಅಕಾಲ ಮರಣದಿಂದ ಕಂಗಾಲಾದಳು. ಕಣ್ಣೀರ ಕೋಡಿ ಹರಿಯಿತು. ಯಮದೂತರು ಅವಳ ದುಃಖವನ್ನು ನೋಡಲಾರದೆ ಯಮರಾಜನಲ್ಲಿ ವಿನಂತಿಸಿಕೊಂಡಾಗ ಯಮರಾಜ 'ದೀವಳಿಗೆ ಹಬ್ಬದೊಳಗೆ ಧನತ್ರಯೋದಶಿಯಿಂದ ಐದು ದಿನಗಳವರೆಗೆ ಯಾರ ಮನೆಯಲ್ಲಿ ಸಾಲು ದೀಪಗಳು ಬೆಳಗುವವೋ ಅಂಥವರಿಗೆ ಅಪಮೃತ್ಯುವಿಲ್ಲ' ವೆಂದು ಹೇಳಿದ ಕಾರಣ ಹಬ್ಬದ ಸಂದರ್ಭದಲ್ಲಿ ದೀಪಗಳನ್ನು ಹಚ್ಚುವ ರೂಢಿ ಬೆಳೆದು ಬಂದಿದೆ ಎಂದು ಹೇಳುತ್ತಾರೆ.

ಜೈನರು ಮಹಾವೀರನ ದಿವ್ಯಜ್ಯೋತಿ ಮಾಯವಾದ ದಿನದಂದು ತಿಳಿದು ನಾಲ್ಕು ದಿನಗಳವರೆಗೆ ಆಚರಿಸುತ್ತಾರೆ. ಭೌಗೋಳಿಕವಾಗಿ ದೀಪಾವಳಿ ಸಂದರ್ಭದಲ್ಲಿ ಸೂರ್ಯನ ಉತ್ತರಾಯಣ ಬರಲೆಂದು ಆಶಿಸಿ ಪೂಜಿಸುವ ರೂಢಿಯೂ ಇದೆ. ಈ ವೇಳೆಯಲ್ಲಿ ಮುಂಗಾರು ಬೆಳೆಯ ಧಾನ್ಯಗಳ ಆಗಮನ. ಹಿಂಗಾರು ಬಿತ್ತನೆಗೆ ಹದವನ್ನು ತಂದು ಕೊಟ್ಟು ನಾಟಿ ಹಾಕಿದ ಎಳೆಯ ಪೈರಿಗೆ ಜೀವರಸವನ್ನು ಎರೆಯುತ್ತಿರುವ ಈ ಹಬ್ಬದ ಸಂಕ್ರಮಣ ಕಾಲವು ಅನ್ನದೇವರ ಅವತಾರ ಕಾಲವೆಂದೇ ಕರೆಯಬಹುದು.

ಆಶ್ವಯುಜ ಬಹಳ ದ್ವಾದಶಿಯಿಂದ ಎಂಟು ದಿನದವರೆಗೆ, ಕೆಲವು ಕಡೆ ಐದು ದಿನ ಮತ್ತೆ ಕೆಲವು ಕಡೆ ಮೂರು ದಿನದವರೆಗೆ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ರಾಮನು ತನ್ನ ತಂದೆ ದಶರಥನ ಅಣತಿ ಯಂತೆ ಹದಿನಾಲ್ಕು ವರ್ಷ ವನವಾಸವನ್ನು ಮುಗಿಸಿಕೊಂಡು ರಾವಣನನ್ನು ಸಂಹರಿಸಿ ಸೀತೆಯೊಂದಿಗೆ ಅಯೋಧ್ಯೆಗೆ ಹಿಂದಿರುಗಿದಾಗ ಅಯೋಧ್ಯೆಯಲ್ಲಿ ಸಂತೋಷ ಸಂಭ್ರಮ ದಿಂದ ಮನ ಮನೆಗಳಲ್ಲಿ ದೀಪವನ್ನು ಬೆಳಗಿಸಿ ಹಬ್ಬವನ್ನು ಆಚರಿಸಿದರಂತೆ. ಅದೇ ದೀಪಾವಳಿ ಎಂದು ಕರೆಯುತ್ತಾರೆ.

ಧನತ್ರಯೋದಶಿ ದೀಪ ಆರಾಧನೆಯ ಆರಂಭದ ದಿನ. ಈ ದಿನವನ್ನು ನೀರು ತುಂಬುವ ದಿನವೆಂದು ಕರೆಯುತ್ತಾರೆ. ಅಂದು ಮನೆಯಲ್ಲಿರುವ ನೀರು ತುಂಬುವ ಪಾತ್ರೆಗಳಾದ ಬಿಂದಿಗೆ, ಗುಂಡಿಗಳನ್ನು ತೊಳೆದು ಅವುಗಳಲ್ಲಿ ನೀರು ತುಂಬಿಡುತ್ತಾರೆ. ಅದಕ್ಕೆ ಪೂಜೆ ನೇವೇದ್ಯ ಮಾಡುತ್ತಾರೆ.

**ನರಕಚತುರ್ದಶಿ :**

ಆಶ್ವೀಜ ಬಹುಳ ಚತುರ್ದಶಿಯನ್ನು ಆಚರಿಸುತ್ತಾರೆ. ಭೂದೇವಿಯ ಮಗನಾದ ನರಕಾಸುರ ಎಲ್ಲ ದೇವತೆಗಳನ್ನು ಸೋಲಿಸಿ, ಯಕ್ಷ, ಕಿನ್ನರ ವಿಧ್ಯಾದರ ಮೊದಲಾದ ಹದಿನಾರು ಸಾವಿರ ಸ್ತ್ರೀಯರನ್ನು ಸೆರೆಯಲ್ಲಿಟ್ಟು ಕಿರುಕುಳಕೊಡಲು ತೊಡಗಿದಾಗ ಕೃಷ್ಣನು ನರಕಾಸುರರನ್ನು ಕೊಂದು ಎಲ್ಲರನ್ನೂ ಬಂಧನದಿಂದ ಬಿಡುಗಡೆ ಮಾಡಿದ. ಈ ಸಂತೋಷದ ಸವಿನೆನಪಿಗಾಗಿ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ನರಕಚತುರ್ದಶಿ ದಿನದಿಂದ ಒಂದು ತಿಂಗಳು ಆಕಾಶದೀಪ ವನ್ನು ಹಚ್ಚಿದರೆ ಪಿತೃಗಳು ಸಂತುಷ್ಟರಾಗುವರೆಂಬ ನಂಬಿಕೆ ಇದೆ. ಅಲ್ಲದೇ 'ದೀಪಾ' ಎಂಬ ರಾಜಕುಮಾರಿಯ ಸತ್ಯ ಮತ್ತು ಭಕ್ತಿಯಿಂದಾಗಿ ದೀಪಾವಳಿಯನ್ನು ಆಚರಿಸಲಾಗುತ್ತದೆ ಎಂದು ಹೇಳಲಾಗುತ್ತದೆ. ನರಕಚತುರ್ದಶಿಯ ದಿನ ಮನೆ ಮಂದಿಯೆಲ್ಲ ಅಭ್ಯಂಜನ ಸ್ನಾನ ಮಾಡಿ ಸಹೋದರಿಯರು ಸಹೋದರರಿಗೆ ಆರತಿ ಬೆಳಗುವರು. ಸಿಹಿ ತಿನ್ನಿಸಿ ಸಂತೋಷ ವನ್ನು ಹಂಚಿಕೊಳ್ಳುವರು ಕೆಲವು ಪ್ರದೇಶಗಳಲ್ಲಿ, ಆ ಬನ ಒಳಕಲ್ಲು, ಅಳತೆಯ ಸಾಮಾನು ಮೊದಲಾದ ವಸ್ತುಗಳನ್ನು ತೊಳೆದು ಪೂಜಿಸಿ ಹಬ್ಬದ ಅಡುಗೆಯನ್ನು ನೈವೇದ್ಯ ಮಾಡುವರು. ತಮಗೆ ನೆರವಾಗುವ ದಿನ ನಿತ್ಯ ಬಳಕೆಯ ವಸ್ತುಗಳಿಗೆ ದೈವತ್ವವನ್ನು ನೀಡಿರುವುದು ನಮ್ಮ ಜನಪದರ ಹೃದಯ ಶ್ರೀಮಂತಿಕೆಯ ದ್ಯೋತಕ.

**ಲಕ್ಷ್ಮೀಪೂಜೆ :**

ಅಮಾವಾಸ್ಯೆಯ ರಾತ್ರಿ ಎಲ್ಲರಿಗೂ ಬೇಕಾದ ಲಕ್ಷ್ಮೀ ಪೂಜೆ ಮಾಡುತ್ತಾರೆ. ಲಕ್ಷ್ಮೀ ಇಷ್ಟಾರ್ಥಗಳನ್ನು ಕರುಣಿಸುವ ಕಾಮಧೇನು ಕಲ್ಪವೃಕ್ಷ ಎಂಬ ನಂಬಿಕೆ. ನಮ್ಮ ರೈತರು ಲಕ್ಷ್ಮಿಯನ್ನು ಭತ್ತದ ಬೆಳೆ ಹಾಗೂ ಕೃಷಿಯ ದೇವತೆಯಾಗಿ, ಪೂಜಿಸುತ್ತಾರೆ. ಆಕೆಯನ್ನು ಕರಿಶೀಣಿ 'ಗೊಬ್ಬರವನ್ನು ಉಳ್ಳವಳು' ಎಂದು ಕರೆಯುತ್ತಾರೆ. ಅಂದರೆ ಭೂಮಿ, ಬೆಳೆ ಮತ್ತು ಪ್ರಾಣಿಗಳಿಗೆ ಫಲತ್ವವನ್ನು ಕೊಡುವ ದೇವತೆ ಎಂದರ್ಥ. ಆಕೆ ಹಸು, ಕುದುರೆ, ಸಂತಾನ, ಆರೋಗ್ಯ, ಐಶ್ವರ್ಯ, ಚಿನ್ನ ಮತ್ತು ಕೀರ್ತಿಗಳನ್ನು ದಯಪಾಲಿಸುವವಳು. ಅಲ್ಲದೆ ಲಕ್ಷ್ಮೀ ಸಂಪತ್ತಿನ ಅಧಿದೇವತೆ ಭಕ್ತರ ಮನೆಗೆ ಪ್ರವೇಶಿಸುತ್ತಾಳೆಂಬ ನಂಬಿಕೆ ಹಿಂದೂಗಳಲ್ಲಿದೆ. ಅಂದು ಯಾರು ಲಕ್ಷ್ಮಿಯನ್ನು ಪೂಜಿಸುತ್ತಾರೋ ಅಂಥವರಿಗೆ ಸುಖ, ಶಾಂತಿ, ಸಂಪತ್ತನ್ನು ನೀಡುವಳೆಂಬ ಪ್ರತೀತಿ. ವ್ಯಾಪಾರಸ್ಥರು ತಮ್ಮ ಲೆಕ್ಕದ ಪುಸ್ತಕ ಮತ್ತು ತೂಕದ ಸಾಮಾನುಗಳನ್ನು ಪೂಜಿಸುತ್ತಾರೆ. ಜೊತೆಗೆ ಯಾವುದಾದರೂ ಒಂದು ಹೊಸ ವಸ್ತುವನ್ನು (ಸಾಮಾನ್ಯವಾಗಿ ಚಿನ್ನ, ಬೆಳ್ಳಿಯಿಂದ ಮಾಡಿದ ವಸ್ತುಗಳನ್ನು ತರುವ ಸಂಪ್ರದಾಯ) ಆ ದಿನ ಕೊಂಡು ತರುವುದುಂಟು. ಈ ರೀತಿ ಕೊಂಡು ತರುವುದರಿಂದ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ. ಜನಪದರ ದೃಷ್ಟಿಯಲ್ಲಿ ಲಕ್ಷ್ಮೀ ಧಾನ್ಯಲಕ್ಷ್ಮೀ, ಸಿರಿಲಕ್ಷ್ಮೀ, ಭಾಗ್ಯಲಕ್ಷ್ಮೀ. ಆಕೆಯನ್ನು ಮನೆಯಲ್ಲಿ ಶಾಶ್ವತವಾಗಿ ನೆಲೆಸುವಂತೆ ಭಕ್ತಿಯಿಂದ ಆರಾಧಿಸುತ್ತಾರೆ.

**ಬಲೀಂದ್ರ ಪೂಜೆ :**

ಬಲಿಪಾಡ್ಯಮಿ ದಿನ ಬಲಿಚಕ್ರವರ್ತಿಯ ದಾನ ಗುಣ ಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಲೋಕಕಲ್ಯಾಣಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡ ಬಲಿಂದ್ರನ ಉದಾರತೆ, ತ್ಯಾಗವನ್ನು ಮೆಚ್ಚಿ ವಿಶಿಷ್ಟವಾದ ಸ್ಥಾನ ನೀಡಿ ಗೌರವಿಸಿದ್ದಾರೆ. ಅಂದು ಗೋವಿನ ಸಗಣಿಯಲ್ಲಿ ಬಲಿಂದ್ರನ ಮೂರ್ತಿಯನ್ನು ಮಾಡಿ ಹೊಲಗದ್ದೆಗಳಲ್ಲಿ ಬೆಳೆದ ಹೂವು, ತೆನೆಗಳನ್ನಿಟ್ಟು ಭಕ್ತಿಯಿಂದ ಪೂಜಿಸುತ್ತಾರೆ. ಸೂರ್ಯಚಂದ್ರರಿರುವ ತನಕ ಬಲೀಂದ್ರನ ಕೀರ್ತಿ, ನೆನಪು ಜನರ ಹೃದಯಸಿಂಹಾಸನದಲ್ಲಿ ಶಾಶ್ವತವಾಗಿರ ಲೆಂದು ಮನದುಂಬಿ ಹಾರೈಸಿದ್ದಾರೆ. ಇದಕ್ಕೆ ಸಾಂಕೇತಿಕವಾಗಿ ಬಲೀದ್ರನ ಜೊತೆಯಲ್ಲಿಯೇ ಸೂರ್ಯ, ಚಂದ್ರರನ್ನು ಪೂಜಿಸುತ್ತಾರೆ.

ಈ ಮೂರು ದಿನಗಳೂ ಸಂಜೆ ವೇಳೆ ದನಕರುಗಳು ಮನೆ ಸೇರುವ ವೇಳೆಗೆ ಮನೆಮುಂದೆ ಸಾಲಾಗಿ ಎಣ್ಣೆ ದೀಪಗಳನ್ನು ಸಾಲಾಗಿ ಹಚ್ಚುತ್ತಾರೆ. ದನಗಳು ಹಚ್ಚಹಸಿರನ್ನು ಮನಸಾರೆ ಮೇದು ಮೈದುಂಬಿಕೊಂಡು ಮನೆಗೆ ಬರುವ ದೃಶ್ಯ ಕಣ್ಮನಗಳಿಗೆ ಮುದನೀಡುತ್ತದೆ. ಇಂಥ ದನಗಳನ್ನು ನೋಡಿಯೇ ಇರಬೇಕು. 'ದೀವಳ್ಗೇಲಿ ದನ ಕೆಡಕಬ್ಯಾಡ, ಬೇಸಿಗೇಲಿ ಬೆಂಕಿ ಕೆಣಕಬ್ಯಾಡ' ಎಂದಿರಬೇಕು. ಈ ಸಂದರ್ಭ





ದಲ್ಲಿ ಹೋರಿಗಳಿಗೆ ಮೈತೊಳೆದು ಕೊಂಬಿಗೆ ಬಣ್ಣ ಹಚ್ಚಿ ಕೊರಳಿಗೆ ಹಾಗೂ ಕಾಲಿಗೆ ಗೆಜ್ಜೆ ಕಟ್ಟುತ್ತಾರೆ. ಕೆಲವರು ಮೈಗೆಲ್ಲ ಚಿತ್ತಾರದ ಬಣ್ಣ ಹಾಕುವುದೂ ಉಂಟು. ಕೊರಳು, ಕೊಂಬುಗಳಿಗೆ, ಹೂವನ್ನು ಹಾಕಿ ಸಿಂಗರಿಸುತ್ತಾರೆ. ನಂತರ ಅವುಗಳಿಗೆ ಪೂಜೆ ಮಾಡಿ ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಯುವಕನೊಬ್ಬ ತನ್ನ ಮನೆಯ ಹೋರಿಗಳ ಬಗ್ಗೆ ಅಭಿಮಾನದಿಂದ ತನ್ನ ಗೆಳೆಯನಿಗೆ

*ಕರಿಯತ್ತು ಕಾಳಿಂಗ ಬಿಳಿಯತ್ತು ಮಾಲಿಂಗ*
*ಸರದಾರ ನನ್ನೆತ್ತು ಸಾರಂಗ-ಬರುವಾಗ*
*ಮನೆಯ ಮಾಳಿಗೆಲ್ಲ ನಡುಗ್ಯಾವು ।*

ಎಂದು ಹೇಳುತ್ತಾನೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಪಾಡ್ದನದ ಪ್ರಕಾರ ಬಲಿಯು ಏಳು ಸಮುದ್ರಗಳಾಚೆ ದೋಣಿಯಲ್ಲಿ ನೂಕಲ್ಪಟ್ಟನೆಂದೂ ವರ್ಷಕ್ಕೊಮ್ಮೆ ತಾನು ಆಳಿದ ಸೀಮೆಯನ್ನು ನೋಡುವುದಕ್ಕಾಗಿ ದೀಪಾವಳಿಯಂದು ಬಂದು ಹೋಗುವನೆಂದೂ, ಆತನಿಗೋಸ್ಕರ ಹೊಸ ಅವಲಕ್ಕಿಯ ನೈವೇದ್ಯ ಸಲ್ಲಿಸಲಾಗು ವುದೆಂದು ಹೇಳಲಾಗಿದೆ. ಕೆಲವು ಕಡೆ ದೀಪಾವಳಿಯಂದು ತಮ್ಮ ತಮ್ಮ ಹೊಲಗಳ ಬದುಗಳಲ್ಲಿ ಸಾಲು ದೀಪಗಳನ್ನು ಇರಿಸಿ, 'ಬಲೀಂದ್ರ ಕಂಬ'ವನ್ನು ನಿಲ್ಲಿಸಿ ಅದರ ಪಕ್ಕಗಳಲ್ಲಿಗೆ ಅಡ್ಡಪಟ್ಟಿಗಳನ್ನು ಕಟ್ಟಿ ಅವುಗಳ ಮೇಲೆ ದೀಪಗಳನ್ನು ಹಚ್ಚುತ್ತಾರೆ. ಈ ಸಂದರ್ಭದಲ್ಲಿಯೂ ಬಲಿಂದ್ರನ ಪಾಡ್ದನವನ್ನು ಹಾಡಿ 'ಕೂ' ಹಾಕುವರು.

ಗ್ರಾಮ ದೇವರ ಗುಡಿಯ ಮುಂದೆ ಉದ್ದವಾದ ಒಂದು ಕಂಬವನ್ನು ನಿಲ್ಲಿಸಿ ತುದಿಯಲ್ಲಿ ಅಡಿಕೆ ಅಥವಾ ಬಿದಿರು ದಬ್ಬೆಯಿಂದ ತ್ರಿಕೋನಾಕಾರವಾಗಿ ಕಟ್ಟಿ ಪ್ರತಿದಿನ ಸಂಜೆ ಕಾರ್ತೀಕ ಮಾಸ ಮುಗಿಯುವವರೆಗೂ ಎಣ್ಣೆದೀಪ ಹಚ್ಚಿ ಏರಿಸುತ್ತಾರೆ. ಪ್ರತಿದಿನ ರಾತ್ರಿ ದೇವರಿಗೆ ವಿಶೇಷ ಪೂಜೆ, ಪ್ರಸಾದ ಹಂಚಿಕೆ. ಗ್ರಾಮದಲ್ಲಿರುವ ಪ್ರತಿಯೊಂದು ಮನೆಯವರು ಸರದಿಯ ಮೇಲೆ ಪೂಜೆ ಸಲ್ಲಿಸುತ್ತಾರೆ. ಈ ಸಂಪ್ರದಾಯ ಭಾವೈಕ್ಯತೆಯ ಸಂಕೇತವೂ ಹೌದು.

ದೀಪಾವಳಿ ಹಬ್ಬದಲ್ಲಿ ಹೆಣ್ಣುಮಕ್ಕಳಿಗೆ, ಅಳಿಯಂದಿರಿಗೆ, ಅದರಲ್ಲೂ ಹೊಸದಾಗಿ ಮದುವೆಯಾದ ಅಳಿಯನಿಗೆ ವಿಶೇಷ ಆಹ್ವಾನ. ಮನೆಯಲ್ಲಿ ಹಬ್ಬದ ಸಡಗರ. ಈ ಸಂತೊಷದ ಸಂದರ್ಭದಲ್ಲಿ ತವರಿಗೆ ಕರೆಸಿಕೊಳ್ಳುವುದನ್ನು ಮರೆಯಬೇಡ ಎಂದು ತಂಗಿಯೊಬ್ಬಳು ಅಣ್ಣನಿಗೆ

ಕಾರುಣ್ಣೀಮೆ ಹಬ್ಬಕ ಕರೆಲಾಕ ಮರೀಬ್ಯಾಡ
ಕಾಲ ಬಾಡೀಗೆ ಕೊಡಬೇಡಾ-ನನ್ನಣ್ಣ
ಹೊನ್ನ ದೀವಳಿಗೆ ಮರಿಬ್ಯಾಡ ।

ಎಂದು ನೆನಪು ಮಾಡಿಕೊಟ್ಟಿದ್ದಾಳೆ. ಹೆಣ್ಣುಮಕ್ಕಳಿಗೆ ಗೌರಿ ಹಾಗೂ ದೀಪಾವಳಿ ಹಬ್ಬಗಳು ಬಹು ಮುಖ್ಯವಾದವು. ಈ ಹಬ್ಬಗಳನ್ನು ತವರು ಮನೆಯಲ್ಲಿ ಆಚರಿಸುವುದೆಂದರೆ ಅವರಿಗೆ ಬಲು ಹಿಗ್ಗು. ಮನೆ ಮಕ್ಕಳೆಲ್ಲ ಬಣ್ಣ ಬಣ್ಣದ ಹೊಸ ಬಟ್ಟೆಗಳನ್ನು ತೊಟ್ಟು ಸಂಭ್ರಮದಿಂದ ಓಡಾಡುವ ದೃಶ್ಯ ಮನಮೋಹಕ. ಎಲ್ಲರ ಮನೆಯಲ್ಲಿಯೂ ಬಗೆಬಗೆಯ ಸಿಹಿ ಊಟ. ಮುಕ್ತ ಮನಸ್ಸಿನಿಂದ ಅತಿಥಿಗಳ ಸತ್ಕಾರ. ಇವೆಲ್ಲ ಅವರ ಸಂತೃಪ್ತಿ ಜೀವನಕ್ಕೆ ಹಿಡಿದ ಕನ್ನಡಿ.

ನಮ್ಮ ಜನಪದರಲ್ಲಿ ಹಾಸ್ಯಕ್ಕೇನೂ ಕೊರತೆಯಿಲ್ಲ. ಸಮಯ ಸಿಕ್ಕಾಗ ತಾವು ನಕ್ಕು ಇತರರನ್ನು ನಗಿಸಿ ಸಂತೋಷ ಪಡುತ್ತಾರೆ. ಅಂತಹ ಒಂದು ಸಂದರ್ಭವನ್ನು ಇಲ್ಲಿ ಉದಾಹರಿಸಬಹುದು. ಅಳಿಯನೊಬ್ಬ ದೀಪಾವಳಿ ಹಬ್ಬಕ್ಕೆಂದು ಮಾವನ ಮನೆಗೆ ಬಂದಿದ್ದಾನೆ. ಅವನಿಗೊಬ್ಬಳು ಗಿಡ್ಡಿಯಾದ ನಾದುನಿ ಇರುತ್ತಾಳೆ. ತನ್ನ ಮುಂದೆ ಮೇಲಿಂದ ಮೇಲೆ ಬುಡಬುಡನೆ ಓಡಾಡುವುದನ್ನು ಕಂಡು

ಗಿಡ್ಡರು ನಡೆದರೆ ಗಿಣಿ ಹಿಂಡು ನಡೆದಾಂಗ
ಉದ್ದನ ಬಾಲಿ ನನ ತಂಗಿ-ನಡೆದಾರ
ರುದ್ರನಾ ತೇರು ಹರಿದಾಂಗ

ಎಂದು ಚುಡಾಯಿಸುತ್ತಾರೆ. ಅದಕ್ಕೆ ಅವಳು ಮಾತನಾಡದೆ ಸಮಯಕ್ಕಾಗಿ ಕಾಯುತ್ತಾಳೆ. ಅಳಿಯನಿಗೆ ಬಗೆಬಗೆಯ ಅಡುಗೆ ಮಾಡಿ ಬೇಡಬೇಡವೆಂದರೂ ಪ್ರೀತಿಯಿಂದ ಬಡಿಸಿದ್ದಾರೆ. ಅವರ ಪ್ರೀತಿಯನ್ನು ಧಿಕ್ಕರಿಸಲಾಗದೆ ಅವರು ಬಡಿಸಿದ್ದನ್ನೆಲ್ಲ ತಿಂದು ಹೊಟ್ಟೆ ಭಾರವಾಗಿ ನಿದ್ರೆ ಆವರಿಸಿದೆ. ರಾತ್ರಿ ಮಲಗಿದವನು ಮರುದಿನ ಮಧ್ಯಾಹ್ನವಾದರೂ ಮೇಲೇಳಲಿಲ್ಲ. ಅತ್ತೆ, ಮಾವ, ಹೆಂಡತಿ ಯಾರು ಬಂದು ಎಬ್ಬಿಸಿದರೂ ಅವನಿಗೆ ಎಚ್ಚರವಾಗಲಿಲ್ಲ. ಇದರಿಂದ ಮನೆ ಮಂದಿಗೆಲ್ಲಾ ಗಾಬರಿ, ನಾದುನಿಗೆ ಈ ವಿಚಾರ ಗೊತ್ತಾಗಿ ಭಾವನನ್ನು ಕುರಿತು

ಕೂಸು ಕುಂಚಿಗೆ ತಿಂತು ಹಾಸಿಗೆ ನೆಲತಿಂತು
ಬಾವಯ್ಯ ಗಡ್ಡ ಇಲಿತಿಂತು-ಮಿಕ್ಕಿದ್ದು
ದೀವಳಿಗೆ ಮುಂದೆ ಚಿಗುರೀತು

ಎಂದು ಹೇಳುವುದೇ ತಡ ಹೊದಿಕೆಯನ್ನು ಕೊಡವಿಕೊಂಡು ಮೇಲೇಳುತ್ತಾನೆ. ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ. ಈ ವರ್ಷ ಇಲಿತಿಂದ ಅವನ ಗಡ್ಡ ಮುಂದಿನ ದೀವಳಿಗೆ ಚಿಗುರಬೇಕಾದರೆ ಅವನೆಂಥ ಗಂಡುಸಾಗಿರಬೇಕು. ಇದಕ್ಕಿಂತ ಬೇಕೆ ಹಾಸ್ಯ ಚಟಾಕಿ!

ದೀಪಾವಳಿ ಹಬ್ಬಕ್ಕೆ ಹೊಂದಿಕೊಂಡಂತೆ ತುಮಕೂರು,

ಬೆಂಗಳೂರು, ಮಂಡ್ಯ ಹಾಗೂ ಹಾಸನ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಭಾಗವಂತಿಕೆ ಮೇಳೆ ನಡೆಯುತ್ತದೆ. ದೀವಳಿಗೆ ಇನ್ನೂ ೧೫ ದಿನಗಳು ಇರುವಾಗಲೇ ಭಾಗವಂತಿಕೆ ಮೇಳಧವರು ಮನೆಮನೆಗೆ ಹೋಗಿ ದವಸ ಧಾನ್ಯಗಳನ್ನು ಸಂಗ್ರಹ ಮಾಡುತ್ತಾರೆ. ಹಾಗೆ ಸಂಗ್ರಹಿಸಿದ ದವಸ ಧಾನ್ಯಗಳನ್ನು ಗ್ರಾಮದ ಹಬ್ಬದಲ್ಲಿ ವಿನಿಯೋಗಿಸುತ್ತಾರೆ. ಹೀಗೆ ದೀವಳಿಗೆ ಸಂದರ್ಭದಲ್ಲಿ ಹಳ್ಳಿ ಹಳ್ಳಿಗಳಲ್ಲಿ ಹೋಗುವುದಕ್ಕೆ 'ಊರಾಡುವುಧು', 'ಭಾಗವಂತಿಕೆ ಹೋಗುವುದು', 'ಹಿಟ್ಟಿನ ಪಟತಕ್ಕೊಂಡು ಹೋಗುವುದು' ಎನ್ನುತ್ತಾರೆ.

ಭಾಗವಂತಿಕೆ ಮೇಳದಲ್ಲಿ ಭಾಗವಂತನಿಗೆ ಮುಂಚೂಣಿ ಸ್ಥಾನ. ಈತನನ್ನು 'ಕತೆಗಾರ' ಎಂದು ಕರೆಯುತ್ತಾರೆ. ಸುಮಾರು 10–15 ಜನರಿರುವ ಈ ಮೇಳದಲ್ಲಿ ಕಲಾವಿದರು ತಲೆಗೀಗೆ ರುಮಾಲು ಧರಿಸಿ, ಕಚ್ಚೆಪಂಚೆ ಉಟ್ಟು, ಬಿಳಿ ಅಂಗಿ ಕರಿಕೋಟು ತೊಟ್ಟಿರುತ್ತಾರೆ. ಕೊರಳಿಗೆ ಸುರಗಿ ಮಾಲೆ ಹಾಕಿ ಸೊಂಟಕ್ಕೆ ವಸ್ತ್ರ, ಕಾಲಿಗೆ ಗೆಜ್ಜೆ ಕಟ್ಟಿರುತ್ತಾರೆ.

ಭಾಗವಂತಿಕೆ ಮೇಳದವರು ಪಟ ತೆಗೆದುಕೊಂಡು ಹೋಗಿ ಗ್ರಾಮದ ದೇವರ ಗುಡಿ ಮುಂದೆ ನಿಲ್ಲಿಸುತ್ತಾರೆ. ಹೀಗೆ ಮಾಡುವುದು ಭಾಗವಂತಿಕೆ ಮೇಳೆ ಕಟ್ಟಲು ಬರುತ್ತಿದ್ದಾರೆ ಎಂದು ಸೂಚನೆ ಕೊಟ್ಟಂತೆ. ಮೇಳದವರು ಊರಾಡಲು ಹೋಗುವಾಗ ಕೆಲವು ಕಡೆ ತಮಟೆ ಮತ್ತು ನಗಾರಿಯನ್ನು ಬಳಸುವುದುಂಟು. ಭಾಗವಂತಿಕೆ ಮೇಳ ಬಂತೆಂದರೆ ಅಲ್ಲಿನ ಹೆಣ್ಣುಮಕ್ಕಳಿಗೆ ತಮ್ಮ ತವರಿನವರು ಬಂದರೆಂದು ಸಂತೋಷಪಡುತ್ತಾರೆ.

ಭಾಗವಂತಿಕೆ ಮೇಳದ ಹಾಡುಗಾರರಲ್ಲಿ ಕೆಲವರು ಮುಮ್ಮೇಳದವರು, ಕೆಲವರು ಹಿಮ್ಮೇಳದವರಿರುತ್ತಾರೆ. ಪ್ರತಿಯೊಬ್ಬ ಕಲಾವಿದನ ಕೈಯಲ್ಲಿ ಕಂಚಿನ ತಾಳವಿರುತ್ತದೆ. ಮುಮ್ಮೇಳದವರು ಹಾಡಿದ್ದನ್ನು ಹಿಮ್ಮೇಳದವರು ಹಾಡುತ್ತಾರೆ. ತಾಳ ಹಾಕುತ್ತಾ ಹಿಂದೆ ಮುಂದೆ ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ. ಮೇಳ ಮುಗಿದ ಮೇಲೆ ಮೇಳದ ತಾಳ ಮತ್ತು ಗೆಜ್ಜೆಗಳನ್ನು ಗುಡಿ ತುಂಬಿಸುತ್ತಾರೆ. ಅಲ್ಲಿಗೆ ಆ ವರ್ಷದ ಭಾಗವಂತಿಕೆ ಮೇಳ ಮುಕ್ತವಾದಂತೆ. ಮತ್ತೆ ಮುಂದಿನ ದೀಪಾವಳಿಗೆ ಅದು ಬಯಲಿಗೆ ಬರುವುದು. ಆದರೆ ಇತ್ತೀಚೆಗೆ ಬೇರೆ ಬೇರೆ ಸಂದರ್ಭಗಳಲ್ಲಿ ಮೇಳ ನಡೆಸುವುದುಂಟು.

ಮಲೆನಾಡಿನ ಕೆಲವು ಭಾಗಗಳಲ್ಲಿ ದೀಪಾವಳಿ ಸಂದರ್ಭದಲ್ಲಿ ಆಚರಿಸುವ ಒಂದು ಆಚರಣೆ 'ಅಂಟಿಕೆ–ಪಂಟಿಕೆ' ಉತ್ತರ ಕರ್ನಾಟಕದಲ್ಲಿ ಇದನ್ನು 'ಬೆಳಕು ನೀಡುವ ಬಿಂಗಿ' 'ಬಿಂಗಿ ಪದ; ಎಂದು ಕರೆಯುತ್ತಾರೆ. ಕಾರ್ತೀಕ ಮಾಸದ ಮೊದಲ ದಿನ ಬಲಿಪಾಡ್ಯಮಿಯಿಂದ ಪ್ರಾರಂಭಿಸಿ, ಕೆಲವು ಕಡೆ ಎರಡು ದಿನಗಳ ಕಾಲ ಮತ್ತೆ ಕೆಲವು ಕಡೆ ಐದು ದಿನಗಳ ಕಾಲ ಅಂಟಿಕೆ ಪಂಟಿಕೆ ಆಚರಣೆ ನಡೆಯುತ್ತದೆ. ಬಲೀಂದ್ರನ ಆರಾಧನೆಗಾಗಿಯೇ ರೂಪುಗೊಂಡಿದೆ ಎಂದು ಹೇಳಲಾಗಿರುವ ಈ ಆಚರಣೆಯ ಹಿನ್ನಲೆಯ ದಂತಕತೆಯ ಪ್ರಕಾರ 'ಬಲೀಂದ್ರನು ಭೂಮಿಯಲ್ಲಿ ಅವತರಿಸಿ, ತಾನು ಪ್ರತಿ ವರ್ಷವೂ ದೀಪಾವಳಿಯ ಸಂದರ್ಭದಲ್ಲಿ ಭೂಮಿಗೆ ಬರುವುದಾಗಿಯೂ ಈ ಅವಧಿಯಲ್ಲಿ ಎಲ್ಲರೂ ತಮ್ಮ ನೋವನ್ನು ಮರೆತು ಸಂತೋಷದಿಂದ ನನ್ನನ್ನು ಸ್ಮರಿಸಿ ಸ್ವಾಗತಿಸಿದರೆ ಅವರ ಇಷ್ಟಾರ್ಥಗಳನ್ನು ನೆರವೇರಿಸುವುದಾಗಿಯೂ ವರವನ್ನು ನೀಡಿದ' ಎಂಬ ನಂಬಿಕೆಯಿದೆ. ಬಲೀಂದ್ರನ ಅಂಶವು ಲೀನನಾಗಿದೆ ಎಂದು ನಂಬಲಾಗುವ 'ಕೈದೀಪ' ವೊಂದನ್ನು ಹಿಡಿದ ಕಲಾವಿದರು ಮನೆಮನೆಗೆ ಹೋಗಿ ಬಲೀಂದ್ರನ ಸಂದೇಶವನ್ನು ನೆನಪು ಮಾಡಿಕೊಟ್ಟು ಅವನ ಮಹಿಮೆಯನ್ನು ಹಾಡಿ ಹೊಗಳುತ್ತಾರೆ.

ಈ ಆಚರಣೆಯಲ್ಲಿ ಭಾಗವಹಿಸುವವರು ಮೊದಲೇ ನಿರ್ದಿಷ್ಟಪಡಿಸಿದಂತೆ ತಮ್ಮ ಜನಾಂಗದ ನಾಯಕನ ಮನೆಯಲ್ಲಿ ಸೇರಿ ತುಳಸಿ ಮತ್ತು ಬಲೀದ್ರನಿಗೆ ಪೂಜೆ ಸಲ್ಲಿಸಿ 'ಕೈದೀಪ' ಹೊತ್ತಿಸಿ ದೇವರನ್ನು ಕುರಿತು ಹಾಡುತ್ತಾರೆ. ಮುಖಂಡನಾದವನು ಕೈದೀಪವನ್ನು ಹಿಡಿದು ಅದು ಆರದಂತೆ ಎಚ್ಚರಿಕೆ ವಹಿಸುತ್ತಾನೆ. ಕಲಾವಿದರೆಲ್ಲರೂ ಕೈಯಲ್ಲಿ 'ದೊಂದಿ' (ಗರಿ ಅಥವಾ ತರಗಿನಿಂದ ಕಟ್ಟಿದ ಒಂದು ಕೋಲು ಪಿಂಡಿ)ಯನ್ನೋ ದೀಪ ಅಥವಾ ಲ್ಯಾಟೀನನ್ನೋ ಹಿಡಿದು 'ದೀಪಾಳಿ–ದೀಪಾಳ್ಯೋ...' ಎಂದು ಕೂಗುತ್ತಾ ಉತ್ಸಾಹದಿಂದ ಮನೆಮನೆಗೆ ಹೋಗುವರು. ಕೆಲವು ಕಡೆ ಕಂಚಿನ ಕೈದೀಪವನ್ನು ಬಳಸಿದರೆ ಮತ್ತೆ ಕೆಲವು ಕಡೆ ವರ್ತುಲಾಕಾರದ ಪಾತ್ರೆಯೊಂದರ ಬದಿಗೆ ಬತ್ತಿಯನ್ನಿಟ್ಟು ಹರಳೆಣ್ಣೆಯನ್ನು ಹಾಕಿ ದೀಪವಾಗಿ ಮಾಡಿಕೊಂಡಿರುತ್ತಾರೆ.

ಅಂಟಿಕೆ–ಪಂಟಿಕೆ ಸಂಪ್ರದಾಯದಲ್ಲಿ 'ಕೈದೀಪ' ಬಹಳ ಪವಿತ್ರವಾದುದು. ಅದನ್ನು ಹೊತ್ತಿಸಿ ಊರೂರು ಸುತ್ತುವಾಗ ಮಧ್ಯೆ ಆರಬಾರದು. ಹಾಗೆ ಒಂದು ವೇಳೆ ಆರಿದರೆ ಅದು ಅಪಶಕುನವೆಂದೂ, ಒಂದು ತಂಡ ಮತ್ತೊಂದು ತಂಡಕ್ಕೆ ಎದುರಾಗಬಾರದೆಂದು ಹೇಳುತ್ತಾರೆ. ಈ ದೃಷ್ಟಿಯಿಂದ ಈ ಕಲಾತಂಡಗಳು ತಾವು ಬರುತ್ತಿರುವುದು ಇನ್ನೊಂದು ತಂಡಕ್ಕೆ ತಿಳಿಯಲೆಂದೇ ದೊಡ್ಡದನಿಯಲ್ಲಿ 'ದೀಪಾವಳಿ–ದೀಪಾಳಿ–ದೀಪಾಳ್ಯೋ– ಎಂದು ಕೂಗುತ್ತಾರೆ.

ತಂಡದವರು ಪ್ರತಿಯೊಂದು ಮನೆಯ ಬಾಗಿಲಿಗೆ ಹೋಗುವ ಮುನ್ನ ಮನೆಯವರಿಗೆ ತಾವು ಬರುವ ಸೂಚನೆ





ನೀಡುವುದಕ್ಕಾಗಿ 'ದೀಪಾಳಿ ದೀಪಾಳಿ' ಎಂದು ಕೂಗುತ್ತಾರೆ. ಮನೆಯವರು ಬಾಗಿಲು ತೆರೆದು ಅವರನ್ನು ಸ್ವಾಗತಿಸುತ್ತಾರೆ. ಕಲಾವಿದರು ಹೊಂದಿಕೊಂಡಿರುವ ಕಂಬಳಿಯನ್ನು ತೆಗೆದು ಒಂದು ಕಡೆಯಿಟ್ಟು ದೀಪವನ್ನು ಮುಂದುಗಡೆ ಇಟ್ಟುಕೊಂಡು ಸಾಲಾಗಿ ಕುಳಿತುಕೊಳ್ಳುವರು. ಸಾಮಾನ್ಯವಾಗಿ ಇವರಲ್ಲಿ ಇಬ್ಬರು ಮುಮ್ಮೇಳದವರು, ಉಳಿದವರೆಲ್ಲ ಇವರಿಗೆ ಹಿಮ್ಮೇಳ ಒದಗಿಸುವರು. ಮೊದಲು ಬಲೀಂದ್ರನನ್ನು ಸ್ತುತಿಸಿ, ಅವನು ಭೂಮಿಯಲ್ಲಿ ಅವತರಿಸಿದಾಗ ನಡೆದ ಪವಾಡಗಳನ್ನು ಕುರಿತು ಹಾಡುತ್ತಾರೆ. ಮನೆಯವರು ಇವರಿಂದ ಅನೇಕ ಹಾಡುಗಳನ್ನು ಹಾಡಿಸಿ ಕೇಳಿ ಸಂತೋಷದಿಂದ ಬಿಂಗಿಯವರ ಕೈದೀಪವನ್ನು ದೇವರ ಮನೆಯಲ್ಲಿ, ದೇವರ ಮುಂದೆ ಇಟ್ಟು ನಮಸ್ಕರಿಸುವರು. ನಂತರ ಕೈದೀಪದ ಒಂದೆರಡು ಬತ್ತಿಯನ್ನು ತೆಗೆದು ಮನೆಯ ದೇವರ ಎದುರಿಗೆ ಇಟ್ಟಿರುವ ನಂದಾದೀಪಕ್ಕೂ, ಆ ನಂದಾ ದೀಪದ ಒಂದೆರಡು ಬತ್ತಿಯನ್ನು ತೆಗೆದು ಮನೆಯ ದೇವರ ಎದುರಿಗೆ ಇಟ್ಟಿರುವ ನಂದಾದೀಪಕ್ಕೂ, ಆ ನಂದಾ ದೀಪದ ಒಂದೆರಡು ಬತ್ತಿಗಳನ್ನು ಕೈದೀಪಕ್ಕೂ ಅದಲು ಬದಲು ಮಾಡಿ ಕೈದೀಪದ ಪಾತ್ರೆಗೆ ಸಾಕಷ್ಟು ಎಣ್ಣೆ ಹಾಕಿ, ದೇವರ ಮನೆಯಿಂದ ತಂದು ತಂಡದ ನಾಯಕನಿಗೆ ಒಪ್ಪಿಸುತ್ತಾರೆ, ಜೊತೆಗೆ ಅಕ್ಕಿ ತೆಂಗಿನಕಾಯಿ ಮೊದಲಾದ ವಸ್ತುಗಳನ್ನು ಸೂಕ್ತ ಕಾಣಿಕೆಯನ್ನು ಕೊಡುತ್ತಾರೆ.

*ಹಾಲು ಹಳ್ಳಾಗಲಿ ಬೆಟ್ಟ ಬೆಳ್ಯಾಗಲಿ*
*ಬೆಟ್ಟಕ್ಕೆ ಬಿಟ್ಟ ಕರುಗಳು ತಪ್ಪದೇ ಮನೆಗೆ ಬರಲಿ*
*ದೀಪಾಳಿ ದೀಪಾಳಿ ದೀಪಾಳ್ಯೋ*

ಎಂದು ಹಾಡುತ್ತಾ ಶುಭವನ್ನು ಹಾರೈಸುತ್ತಾರೆ.

ನಾವು ಬೋರೊಬ್ಬರಿಂದ ಪಡೆದ ಸಹಾಯ, ಉಪಕಾರಕ್ಕೆ ಕೃತಜ್ಞತೆ ಸಲ್ಲಿಸುವುದು, ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿದೆ. ಇದಕ್ಕೆ ಜನಪದರು ಹೊರತಾಗಿಲ್ಲ. ಅವರ ರಕ್ತ ಕಣಕಣಗಳಲ್ಲಿ ಕೃತಜ್ಞತೆ ಸಲ್ಲಿಸುವ ಸಂಸ್ಕೃತಿ ತುಂಬಿಕೊಂಡಿದೆ. ಅದಕ್ಕೆ ಅವರು ತಮ್ಮ ಕೃಷಿಕಾಯಕದಲ್ಲಿ ನೆರವಾದ ವಿವಿಧ ಬಗೆಯ ಆಯುಧಗಳು, ಪರಿಕರಗಳು, ಹಾಗೂ ದನಕರುಗಳನ್ನು ವಿಶೇಷವಾಗಿ ಭಯ ಭಕ್ತಿಯಿಂದ ಸ್ಮರಿಸುವುದನ್ನು ಕಾಣುತ್ತೇವೆ. ದೀಪಾವಳಿ ಸಂದರ್ಭದಲ್ಲಿ ದಿನ ನಿತ್ಯ ತಮ್ಮ ಕೃಷಿ ಚಟುವಟಿಕೆಗಳಲ್ಲಿ ನೆರವಾಗುವ ದನಗಳನ್ನು ಪೂಜಿಸುವುದರ ಮೂಲಕ ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಾರೆ. ಹುಲ್ಲಿನಿಂದ ಏಳು ಹೆಡೆಯ ಆಕಾರದ ವಿನ್ಯಾಸ ಮಾಡಿ ಅದರೊಳಗೆ ದೀಪವನ್ನಿಟ್ಟು ಹಸುಗಳಿಗೆ ಬೆಳಗುತ್ತಾರೆ. ಈ ಆಚರಣೆಗೆ 'ಅಣಿಪೀಣಿ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಹಾಡುಗಳನ್ನು ಹಾಡುತ್ತಾರೆ. ಹೀಗೆ ಮಾಡುವುದರಿಂದ ದನಕರುಗಳಿಗೆ ರೋಗರುಜಿನಗಳು ಬರುವುದಿಲ್ಲ ಎಂಬ ನಂಬಿಕೆ ಇದೆ. ಕೆಲವು ಕಡೆ ಕಿಚ್ಚು ಹಾಯಿಸುವುದೂ ಉಂಟು.

ಹೀಗೆ ಬೆಳಕಿನ ಹಬ್ಬ ದೀಪಾವಳಿಯನ್ನು ಮನೆ ಮಂದಿಯೆಲ್ಲ ಸೇರಿ ಸಂತೋಷ, ಸಂಭ್ರಮದಿಂದ ಆಚರಿಸುತ್ತಾರೆ. ಇದರಿಂದ ದೇಹ ಮನಸ್ಸುಗಳಿಗೆ ಸುಖ ಶಾಂತಿ, ಲಭಿಸಿ ಆತ್ಮೋನ್ನತಿ ದೊರೆತು, ನರಕಾಸುರರಂತಹ ದುಷ್ಟಶಕ್ತಿಗಳ ದಮನವಾಗಿ, ಬಲೀಂದ್ರನಂಥ ತ್ಯಾಗ ಜೀವನ ನಮ್ಮಲ್ಲಿ ಬೆಳೆದು ಎಲ್ಲರೂ ಸುಸಂಸ್ಕೃತರಾಗಿ ಬಾಳೋಣ. ದೀಪಾವಳಿಯನ್ನು ಸಂತೋಷದಿಂದ ಆಚರಿಸುವುದರ ಮೂಲಕ ನಮ್ಮ ಮನದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಓಡಿಸಿ ಬೆಳಕನ್ನು ಸ್ವಾಗತಿಸೋಣ.

*

## ದಾಸೋಹದ ಮೂಲಕ ಚತುರ್ವಿಧ ಸಂಪನ್ನತೆ

**ದಾಸೋಹವೆಂಬ ಸೋಹೆಗೊಂಡು ಹೋಗಿ**
**ಗುರುವ ಕಂಡೆ, ಲಿಂಗವ ಕಂಡೆ,**
**ಜಂಗಮವ ಕಂಡೆ, ಪ್ರಸಾದವ ಕಂಡೆ**
**ಇಂತೀ ಚತುರ್ವಿಧ ಸಂಪನ್ನನಾದೆ**
**ಕಾಣಾ, ಕೂಡಲಸಂಗಮದೇವಾ**

–ಧರ್ಮಪಿತ ಬಸವಣ್ಣನವರು

ಲಿಂಗಾಯಿತನ ಚತುರ್ವಿಧ ಸಾರಾಯ ಸಂಪತ್ತೆಂದರೆ ಗುರು, ಲಿಂಗ; ಜಂಗಮ, ಪ್ರಸಾದ.

ಗುರು, ಲಿಂಗ, ಜಂಗಮ, ಪ್ರಸಾದವನ್ನು ಕಾಣಬೇಕಾದರೆ ಸದ್ಭಕ್ತರಾದವರು ಗುರು, ಲಿಂಗ, ಜಂಗಮ, ಪ್ರಸಾದಗಳನ್ನು ಹುಡುಕಿಕೊಂಡು ಅಲೆಯಬಾರದು. 'ಕುಳಿತು ಜಂಗಮ ಕೆಟ್ಟ, ತಿರುಗಿ ಭಕ್ತ ಕೆಟ್ಟ' ಎಂಬ ಗಾದೆಯ ಮಾತಿನಂತೆ ಭಕ್ತನಾದವನು ಸ್ಥಿರವಾಗಿ ಒಂದೆಡೆ ನೆಲೆನಿಂತು ಸತ್ಯಶುದ್ಧ ಕಾಯಕ ಮಾಡಿ, ಭಕ್ತಿ ದಾಸೋಹ ನಡೆಸುತ್ತಿದ್ದರೆ, ಹತ್ತು ಲಕ್ಷ ಗಾವುದ ದೂರದಲ್ಲಿದ್ದರೂ ಭಕ್ತನನ್ನು ಹುಡುಕಿಕೊಂಡು ಗುರು ಲಿಂಗ–ಜಂಗಮ ಆಗಮಿಸುತ್ತಾರೆ. ಆಗ ದಾಸೋಹ ಮೂಲಕವೇ ಅನುಭಾವ ಪ್ರಸಾದ ದೊರೆಯುತ್ತದೆ, ಎಂದು ಧರ್ಮಪಿತ ಬಸವಣ್ಣನವರು ದಾಸೋಹದ ಮಹಿಮೆಯನ್ನು ಅರುಹಿದ್ದಾರೆ.

(ವಚನ ತಾಂಬೂಲ)

# ಉಪ್ಪಿನ ಋಣ

– ಈರಯ್ಯ ಕಿಲ್ಲೇದಾರ 'ಈನಿಂಕಿ' ಕವಿತಾ ಪ್ರಕಾಶನ ಗುಡಿಕಟ್ಟಿ, ಅಂಚೆ, ಕ್ರ, ಬೆಳಗಾವಿ ಜಿಲ್ಲೆ– ೫೯೧೧೧೦.

ದೇವ ಋಣ, ಪಿತೃಋಣ ಮತ್ತು ಋಷಿಋಣ ಈ ಮೂರು ಋಣಗಳಿಗೆ ಹಿಂದಿನವರು ಬಹಳ ಮಹತ್ವ ಕೊಟ್ಟಿದ್ದಾರೆ. ಇವುಗಳಷ್ಟೇ ಮಹತ್ವದ ಋಣ ಉಪ್ಪಿನ ಋಣ. ಮನುಷ್ಯ ಹುಟ್ಟಿದ ಕೂಡಲೇ ಒಂದಿಲ್ಲಾ ಒಂದು ಋಣದಲ್ಲಿ ಸಿಲುಕುತ್ತಾನೆ. ಸಾಯುವ ತನಕ ಎಷ್ಟು ಋಣಗಳಲ್ಲಿ ಸಿಲುಕುವನೋ ಎಷ್ಟು ಋಣಗಳಿಂದ ಮುಕ್ತನಾಗುವನೋ ಇಲ್ಲವೇ ಋಣದಲ್ಲೇ ಸಾಯುವನೋ ತೀಳಿಯದು. ಆದರೆ ಉಪ್ಪಿನ ಋಣ ತೀರಿಸದಿರುವುದು ಮಾನವೀಯತೆ ಎನಿಸದು. ಭೀಷ್ಮ ದ್ರೋಣರು ಸಹಿತ ಉಪ್ಪಿನ ಋಣದಿಂದಾಗಿ ಕೌರವರ ಪಕ್ಷಪಾತಿಯಾದದ್ದು ಈಗ ಇತಿಹಾಸವಾಗಿದೆ. 'ಉಪ್ಪುಂಡ ಮನೆಗೆ ಎರಡು ಬಗೆಯಬಾರದು' ಎಂಬ ಗಾದೆ ಮಾತಿದೆ. ಉಪ್ಪು ಕೇವಲ ಉಪ್ಪು ಆಗಿರದೆ ಅನ್ನದ ಸಂಕೇತ ಎನಿಸಿದೆ. ಉಪ್ಪುಂಡ ಮನೆಗೆ ಎರಡು ಬಗೆಯುವುದೆಂದರೆ ದ್ರೋಹ ಬಗೆಯುವುದು, ಉಪ್ಪುಂಡ ಸ್ಮರಣೆ ಬಹಳ ಮುಖ್ಯವಾದದ್ದು.

ಊಟಕ್ಕೆ ಮೊದಲು ಉಪ್ಪಿನಕಾಯಿ ಬೇಕೇ ಬೇಕು. ಅದರಂತೆ ಉಪ್ಪಿನಕಾಯಿ ಮತ್ತು ಉಪ್ಪಿಟ್ಟುಗಳಿಗೆ ಉಪ್ಪು ಬಹಳ ಅವಶ್ಯಕ ವಸ್ತು ಆಗಿದೆ. ಉಪ್ಪು ಹಾಕಿರುವುದರಿಂದಲೇ ಉಪ್ಪಿನಕಾಯಿ ಬಹಳ ದಿನಗಳವರೆಗೆ ಕೆಡದಂತೆ ಹಾಗೂ ರುಚಿಕರವಾಗಿರಬಲ್ಲವು. 'ಉಪ್ಪಿಲ್ಲದೆ ಎಣ್ಣೆಗೆ ಗೊಂದಲ ಹಾಕುವವರು' ಎಂದ ಹಾಗೆ ಅಡುಗೆಗೆ ಉಪ್ಪು ಅವಶ್ಯಕವಾಗಿದೆ. ಉಪ್ಪು ಇಲ್ಲದೆ ಎಣ್ಣೆಗೆ ಹುಡುಕಾಡುವ ವಗ್ಗರಣೆ ಹಾಕುವವರನ್ನು ಕಂಡು ಉಪ್ಪಿಲ್ಲದೆ ಎಣ್ಣೆಗೆ ಗೊಂದಲ ಹಾಕುವವರು ಎಂದು ಕರೆದಿದ್ದಾರೆ. ಅಡುಗೆಗೆ ಉಪ್ಪು ಹೆಚ್ಚು ಆಗಬಾರದು. ಕಡಿಮೆಯೂ ಆಗಬಾರದು. ಹೆಚ್ಚಾದರೆ ರುಚಿ ಎನಿಸದು. ಉಪ್ಪಿನ ಉರಲು ಎನಿಸುತ್ತದೆ. ಉಪ್ಪು ಕಡಿಮೆಯಾದರೆ ಸಪ್ಪಗಾಗುತ್ತದೆ. ಅಂತೆಯೇ ಉಪ್ಪೇರದ ಖಾರವಿಳಿಯದ ಊಟ ರುಚಿಕರವಾಗುತ್ತದೆ. ಮನುಷ್ಯನ ಮಾತುಗಳಲ್ಲಿ ಸಹಿತ ಉಪ್ಪೇರದ ಖಾರವಳಿಯದ ಸಮತೋಲನ ಸಾಧ್ಯವಾಗಬೇಕು. ಕೋಪ ತಾಪಗಳಿಲ್ಲದ ಮಾತು ಸಮತೂಕದವು ಎನಿಸುತ್ತದೆ. ಉಪ್ಪಿಲ್ಲದ ಊಟ ರುಚಿಸದು. ಅದರಂತೆ ಊಟವಿಲ್ಲದೆ ಮನುಷ್ಯ ಬದುಕಲಾರ.

'ಉಪ್ಪು ತಿಂದವ ನೀರು ಕುಡಿಯಲೇಬೇಕು'. ಉಪ್ಪು ತಿಂದವ ನೀರು ಕುಡಿದಾಗಲೇ ಸಮಾಧಾನವಾಗುತ್ತದೆ. ಇಲ್ಲದಿದ್ದರೆ ಸಂಕಟವಾಗುತ್ತದೆ. ಉಪ್ಪು ಆಗುವುದು ನೀರಿನಿಂದಲೇ. ಉಪ್ಪು ತಿಂದಾಗ ಆಗುವ ಸಂಕಟಕ್ಕೆ ಪರಿಹಾರ ನೀರೇ ಆಗಿದೆ. ಇಲ್ಲಿ ಇನ್ನೊಂದು ಮಹತ್ವದ ವಿಚಾರವಿದೆ. ಅದೆಂದರೆ ತಪ್ಪು ಮಾಡಿದವ(ಉಪ್ಪು ತಿಂದವ) ನೀರು ಕುಡಿಯಲೇ ಬೇಕು. ಪ್ರಾಯಃಶ್ಚಿತ್ ಅಥವಾ ಶಿಕ್ಷೆ ಅನುಭವಿಸಲೇ ಬೇಕು. ಎಲ್ಲರ ಗೌರವಕ್ಕೆ ಪಾತ್ರವಾದ ಹಾಗೂ ಎಲ್ಲರ ಪ್ರೀತಿಯ ವಸ್ತು ಉಪ್ಪು ಆಗಿದೆ. ಉಪ್ಪು ಬಂಧುತ್ವದ ಸಂಕೇತ ಎನಿಸಿದೆ. ಬಾಂಧವ್ಯದ ಬೆಸುಗೆ ಮಾಡುವ ಗುಣ ಉಪ್ಪಿಗಿದೆ. ಅಂತೆಯೇ 'ಉಪ್ಪಿಗಿಂತ ರುಚಿಯಿಲ್ಲ ತಾಯಿಗಿಂತ ಬಂಧುವಿಲ್ಲ' ಎಂಬ ಗಾದೆ ಮಾತಿದೆ. ಉಪ್ಪಿನಲ್ಲಿರುವ ರುಚಿಯು ಎಲ್ಲ ರಸಗಳಲ್ಲಿಯೂ ಶ್ರೇಷ್ಠ ಎನಿಸಿದೆ. ಉಪ್ಪಿನಲ್ಲಿರುವ ರುಚಿ ತಾಯಿಯಲ್ಲಿರುವ ಮಮತೆ ಜಗತ್ತಿನಲ್ಲಿ ಶ್ರೇಷ್ಠ ಎನಿಸಿವೆ. ಹೋಲಿಕೆಯಿಲ್ಲದ ಬಾಂಧವ್ಯ ತಾಯಿಯಲ್ಲಿದೆ. ತಾಯಿ ಮತ್ತು ಮಗುವಿನಲ್ಲಿರುವ ನಂಟು ಉಪ್ಪು ಮತ್ತು ಸಮುದ್ರಗಳ ನಂಟಿನಷ್ಟೇ ಮಹತ್ವದ್ದಾಗಿದೆ. ಅದು ಬೇರ್ಪಡಿಸಲಾಗದ ನಂಟು. ಅದೇ ನಂಟು ಮನುಷ್ಯ ಮತ್ತು ಉಪ್ಪಿಗೂ ಅಂಟಿದೆ. ಮನುಷ್ಯ ಮತ್ತು ಮಕ್ಕಳ ನಡುವೆಯೂ ಅದೇ ನಂಟು ಅಂಟಿಕೊಂಡಿದೆ. 'ಅಂವನ್ನ ಬಾಳ ಉಪ್ಪುಪ್ಪ ಮಾಡಲೆ ಅದಕ್ಕ ಅಂವಾ ಹಠಾ ಮಾಡ್ತಾನು' ಎಂದು ಮಕ್ಕಳನ್ನು ಹೆಚ್ಚು ಪ್ರೀತಿಸುವ (ಮುದ್ದು ಮಾಡುವ) ಸಂದರ್ಭದಲ್ಲಿ ಹೇಳುವುದುಂಟು. ದೊಡ್ಡವರು ಮಕ್ಕಳಿಂದಲೇ 'ಉಪ್ಪು' ಕೊಡು ಉಪ್ಪಾ ಕೊಡು ಎಂದು ಮುದ್ದಿಸಿಕೊಳ್ಳುತ್ತಾರೆ.

ಮಕ್ಕಳಿಗೆ ದೃಷ್ಟಿಯಾದಾಗ ಉಪ್ಪಿನಾರತಿ ಮಾಡಿ ದೃಷ್ಟಿ ನಿವಾರಣೆ ಮಾಡುತ್ತಾರೆ. ಉಪ್ಪಿನ ಕಾವು ಕೊಟ್ಟರೆ ನೋವು ಅದರಲ್ಲೂ ಒಳನೋವು ಶಮನವಾಗುವುದು. ಹಿಮಾಲಯದೆತ್ತರ ದಲ್ಲಿರುವವರಿಂದ ಹಿಡಿದು ಸಮುದ್ರದ ದಂಡೆಯಲ್ಲಿರುವವರೆಲ್ಲರಿಗೂ ಉಪ್ಪು ಬೇಕೇ ಬೇಕು. ಉಪ್ಪು ಎಲ್ಲರಿಗೂ ಪ್ರಿಯವಾಗಿದೆ. ಸಂನ್ಯಾಸಿಗಳನ್ನು ಹೊರತು ಪಡಿಸಿ ಉಪ್ಪು ಎಲ್ಲರಿಗೂ ಅತಿ ಅವಶ್ಯಕ ಎನಿಸಿದೆ. ಸಂನ್ಯಾಸಿಗಳು ಸಪ್ಪಗಾದ ಊಟ ಉಂಡು ಕಾಮ ಕ್ರೋಧಗಳನ್ನು ಸಂಯಮದಲ್ಲಿಟ್ಟುಕೊಳ್ಳುತ್ತಾರೆಂದು ಹೇಳಲಾಗುತ್ತಿದೆ. ಸಂಸಾರಿಕರು ಉಪ್ಪುಂಡವರು. ಅವರಿಗೆ ಕಾಮ–ಕ್ರೋಧಗಳು ಸಹಜ ಎಂಬ ಅಭಿಪ್ರಾಯವಿದೆ. ಉಪ್ಪು ಒಳಿತಿಗೆ, ಬಾಂಧವ್ಯಕ್ಕೆ, ಪ್ರೀತಿಗೆ, ರುಚಿಗೆ, ಅವಶ್ಯವಿರುವಂತೆ ಕೆಟ್ಟದ್ದಕ್ಕೂ ಬಳಕೆಯಾಗುವುದುಂಟು. ಕೊಡ ಹಾಲಿನಲ್ಲಿ ಹಿಡಿ ಉಪ್ಪು ಹಾಕಿದರೇ ಇಡೀ ಹಾಲೇ ಕೆಟ್ಟು(ಒಡೆದು) ಮೊಸರಾಗುವುದು. ಅದೇ ಮಾತನ್ನು ಸಮಾಜದಲ್ಲಿರುವ ಸಜ್ಜನ ಹಾಗೂ ದುರ್ಜನರನ್ನು ಕುರಿತು ಹೇಳುವುದುಂಟು. ಬಹಳಷ್ಟು ಜನ ಸಜ್ಜನರಿರುವ ಸಮಾಜದಲ್ಲಿ ಕೆಲವೇ ಜನ ದುರ್ಜನರಿದ್ದರೆ ಸಾಕು ಸಮಾಜದ ಲಯವೇ ತಪ್ಪಿ ಹೋಗುವುದು.

'ಸಮುದ್ರದ ಉಪ್ಪು ಬೆಟ್ಟದ ನೆಲ್ಲಿ ಎತ್ತನಿಂದೆತ್ತ ಸಂಬಂಧವಯ್ಯಾ' ಎಂದು ಅಲ್ಲಮಪ್ರಭು ಸೋಜಿಗಪಟ್ಟಿದ್ದಾನೆ. ಸಮುದ್ರದ ಉಪ್ಪು ಸಾವಿರಾರು ಅಡಿ ಎತ್ತರದ ಬೆಟ್ಟದಲ್ಲಿ ಬೆಳೆದ ನೆಲ್ಲಿಗೂ ಅವಿನಾಭಾವ ಸಂಬಂಧ ಇದೆ. ನೆಲ್ಲಿಯಲ್ಲಿರುವ ಹುಳಿ ಹಾಗೂ ಉಪ್ಪಿನಲ್ಲಿರುವ ಲವಣಾಂಶ ಸೇರಿದಾಗ ಸ್ವಾದಿಷ್ಟಕರ ರುಚಿ ಉತ್ಪನ್ನವಾಗುತ್ತದೆ. ಇಂತಹ ಸ್ವಾದಿಷ್ಟಕರ ಹಾಗೂ ರುಚಿಕರವಾದ ಹೋಲಿಕೆಯಿಲ್ಲದ ಗುಣ ರಸ ಹೊಂದಿದ ಉಪ್ಪು ಬಹಳೇ ಸೋವಿ ಎಂಬುದು ಗಮನಾರ್ಹ ಸಂಗತಿಯಾಗಿದೆ. ಇಂತಹ ಸೋವಿ ದರದಲ್ಲಿ ಸಿಗುವ, ಜನರ ಅವಶ್ಯಕ ವಸ್ತುವಾದ ಉಪ್ಪು ಇನ್ನು ದುಬಾರಿ ಬೆಲೆಗೆ ಮಾರಾಟವಾಗಲಿದೆ. ನಿಸರ್ಗದತ್ತವಾದ ಉಪ್ಪು ಆಯೋಡಿನ್ ಎಂಬ ರಾಸಾಯನಿಕ ಸೇರಿಸಿ ತನ್ನ ನಿಸರ್ಗ ಸಹಜವಾದ ರೂಪ–ರುಚಿಗಳನ್ನು ಕಳೆದುಕೊಂಡು ವಿಕೃತ ರೂಪದಲ್ಲಿ ಅದೂ ದುಬಾರಿ ಬೆಲೆಗೆ ಸಿಗಲಿದೆ. ನಿಸರ್ಗದತ್ತವಾದ ಉಪ್ಪನ್ನು ಸೇವಿಸಿದರೆ ಗಳಗಂಡ ರೋಗ ಬರುವುದೆಂದು ವಿ(ಅ)ಜ್ಞಾನಿ ಗಳು ಶಿಫಾರಸ್ಸು ಮಾಡಿದ್ದಾರಂತೆ. ವಿಜ್ಞಾನಿಗಳೂ ಕಂಪನಿಗಳ ಉಪ್ಪುಂಡವರೇ ಸರಿ. ಅಂದ ಮೇಲೆ ಕೇಳುವುದೇನು? ಇವರೆಲ್ಲ 'ತಂದೆಯನರಿಯದ ಸಂದೇಹಿಗಳು ತಾಯಿಯನರಿಯದ ತರ್ಕಿಗಳೇ' ಸರಿ.

ನಮ್ಮಜ್ಜ ಮುತ್ತಜ್ಜ ನಮ್ಮಮ್ಮ ಹೀಗೆ ಎಲ್ಲರೂ ನಿಸರ್ಗದತ್ತವಾದ ಉಪ್ಪನ್ನು ತಿಂದು ಬದುಕಿದ್ದರಲ್ಲವೇ? ಅವರೆಲ್ಲ ಉಪ್ಪಿನ ಋಣ ಮರೆಯುವುದು ಸಾಧ್ಯವಿಲ್ಲ. ಅವರೆಲ್ಲ ನೂರಾರು ವರ್ಷ ಧೃಢಕಾಯರಾಗಿ ಆರೋಗ್ಯವಂತರಾಗಿ ಉಪ್ಪುಂಡು ದ್ರೋಹ ಬಗೆಯದೆ ಜೀವನ ನಡೆಸಿದ್ದಾರಲ್ಲವೇ? ಆದರೆ ರೋಗಗಳ ತವರೂರಾಗಿ ಅಲ್ಪಾಯುಷಿಗಳಾಗಿ ಅಯೋಡಿನ್ ಸೇರಿಸಿದ ಉಪ್ಪು ತಿಂದು ಎಷ್ಟು ದಿನ ಬದುಕಬಲ್ಲರು ಹೈಬ್ರೀಡ್ ಜನರು? ಅಯೋಡಿನ್ ಸೇರಿಸಿದ ಉಪ್ಪು ತಿನ್ನಲು ಹೇಳುವ ವಿಜ್ಞಾನಿಗಳು ಎಂತಹ ದ್ರೋಹಿಗಳು? ಎಂದು ಯಾವ ಕೆಟ್ಟ ಮಾತಿನಲ್ಲಿ ಹೇಳುವುದು? *



## ಶರಣರ ಪಾದದಲ್ಲಿ ಭೃತ್ಯನಾಗಿರು

ಮೇಲಾಗಲೊಲ್ಲೆನು ಕೀಳಾಗಲಲ್ಲದೆ,
ಕೀಳಂಗಲ್ಲದೆ ಹಯನು ಕರೆವುದೆ?
ಮೇಲಾಗಿ ನರಕದೋಳೋಲಾಡಲಾರೆನು
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು
ಮಹಾದಾನಿ ಕೂಡಲಸಂಗಮದೇವಾ

–ಮಹಾನುಭಾವಿ ಬಸವಣ್ಣನವರು

ಭೃತ್ಯಾಚಾರದ ಆಚರಣೆಯಲ್ಲಿರುವ ಸದ್ಭಕ್ತನು ಶರಣರ ಸಮ್ಮುಖದಲ್ಲಿ ಯಾವ ರೀತಿಯಾಗಿ ನಡೆದುಕೊಳ್ಳಬೇಕು ಎಂಬುದನ್ನು ಮಹಾನುಭಾವಿ ಬಸವಣ್ಣನವರು ಒಂದು ದೃಷ್ಟಾಂತದ ಮೂಲಕ ತಿಳಿಯಪಡಿಸಿದ್ದಾರೆ.

ವ್ಯಕ್ತಿಯು ಯಾವುದೇ ರಂಗದ ಸಾಧನೆಯಲ್ಲಿ ಎಷ್ಟೇ ದೊಡ್ಡ ಹುದ್ದೆಗೆ ಏರಿದರೂ ಸಹ, ತಾನು ಮಾತ್ರ ಸದಾಕಾಲ ಸದುವಿನಯವಂತನಾಗಿರಬೇಕು. ಒಂದು ಆಕಳು ಇದೆ, ಅದರ ಹಾಲು ಹಿಂಡಿಕೊಳ್ಳಬೇಕಿದೆ. ಹಾಲು ಹಿಂಡುವ ವ್ಯಕ್ತಿಯು ಆಕಳಿಗಿಂತ ನಾನೇನು ಕಡಿಮೆ? ಅದರ ಪಾದದ ಹತ್ತಿರ ಕುಳಿತುಕೊಳ್ಳಬೇಕೇ? ಎಂದು ದುರಹಂಕಾರದಿಂದ ಆಕಳಿನ ಬೆನ್ನಿನ ಮೇಲೆ ಕುಳಿತರೆ ಹಾಲು ಹಿಂಡಿಕೊಳ್ಳುವುದು ಸಾಧ್ಯವೇ? ಖಂಡಿತ ಸಾಧ್ಯವಿಲ್ಲ.

ಅದೇ ರೀತಿ ಶರಣರ ಪಾದದ ಹತ್ತಿರ ಕುಳಿತು ಸದುವಿನಯದಿಂದ, ಶ್ರದ್ಧೆಯಿಂದ ಕೇಳಿದರೆ ಅಮೃತ ರೂಪದ ಅನುಭಾವ ಜ್ಞಾನವನ್ನು ಕರುಣಿಸುತ್ತಾರೆ.

(ವಚನ ತಾಂಬೂಲ)

ನೀಷ್ಠೆಯಿರಲಿ, ಏಕದೇವೋಪಾಸನೆಯಲಿ,
ಸ್ನೇಹವಿರಲಿ, ಕೈಹಿಡಿದ ಸಜ್ಜನೆಯಲಿ.
ಎಚ್ಚರವಿರಲಿ, ನಡೆನುಡಿಯಲಿ.
ಕರುಣೆಯಿರಲಿ, ಸಕಲ ಜೀವಿಗಳಲಿ.
ಸದ್ಭಾವವಿರಲಿ, ಗುರುಹಿರಿಯರಲಿ.
ಆದರಿರಲಿ, ಬಂಧು–ಬಾಂಧವರಲಿ.
ಪ್ರೀತಿಯಿರಲಿ, ಸರ್ವರಲಿ.
ಭಕ್ತಿಯಿರಲಿ, ಬಸವ ಪ್ರಿಯ ಮುರುಘರಾಜೇಂದ್ರನಲಿ

–ಶಿವಮೂರ್ತಿ ಮುರುಘಾಶರಣರು

# ಬಸವಣ್ಣ ಮತ್ತು ಸಮಾನತೆ

– ಬಿಂಡಿಗನವಿಲೆ ಭಗವಾನ್, ಪ್ರಾಧ್ಯಾಪಕರು, ಕೊಂಗಾಡಿಯಪ್ಪ ಪ.ಪೂ. ಕಾಲೇಜು, ದೊಡ್ಡಬಳ್ಳಾಪುರ –೫೬೧ ೨೦೩.

'ಮಾನವ ಜಾತಿ ತಾನೊಂದೆ ವಲಂ' ಎಂದು ಆದಿಕವಿ ಪಂಪ ಸಾರಿ ಮನುಷ್ಯ ಮನುಷ್ಯರ ನಡುವೆ ಜಾತಿ, ವಿಜಾತಿಗಳೆಂಬ ಅರ್ಥಹೀನ ಭಾವಗಳಿರಕೂಡದೆಂದನು. 'ಮಾನವ ಜನ್ಮ ದೊಡ್ಡದು, ಅದನ್ನು ಹಾಳು ಮಾಡಬೇಡಿರೊ ಹುಚ್ಚಪ್ಪಗಳಿರಾ', 'ಕುಲ, ಕುಲ, ಕುಲಾ ಎಂದು ಹೊಡೆದಾಡದಿರಿ' ಎಂದು ಮುಂತಾಗಿ ಎಚ್ಚರಿಸಿದರು ದಾಸವರೇಣ್ಯರು. ಇಪ್ಪತ್ತೈದು ಶತಮಾನಗಳ ಪೂರ್ವದಲ್ಲೇ ಭಗವಾನ್ ಬುದ್ಧನು 'ಮೇಲು ಕೀಳೆಂಬುದಿಲ್ಲ, ಸರ್ವರೂ ಸಮಾನರು, ಸದ್ಗುಣಗಳಿಂದ ಯಾರೇ ಆಗಲಿ ಉತ್ತಮರಾಗಬಹುದು, ಹುಟ್ಟಿನಿಂದ ಸಂಪನ್ನತೆ ಬರುವುದಿಲ್ಲ...' ಮುಂತಾಗಿ ನಿತ್ಯಸತ್ಯವನ್ನು ಕಂಡುಕೊಂಡು ಅದನ್ನು ಉಪದೇಶಿಸಿದ್ದ. ಹೀಗೆ ಇತಿಹಾಸದುದ್ದಕ್ಕೂ ಸಾಮಾಜಿಕ ಸಮಾನತೆಗಾಗಿ ಸಾಧುಗಳು ಸಂತರು, ಸಾತ್ವಿಕರು ವಿವಿಧ ಕಾಲಘಟ್ಟಗಳಲ್ಲಿ ಚಿಂತನ, ಮಂಥನ ನಡೆಸಿದ್ದಾರೆ, ಹೋರಾಡಿದ್ದಾರೆ. ಈ ದಿಸೆಯಲ್ಲಿ ಹನ್ನೆರಡನೆಯ ಶತಮಾನ ಅತ್ಯಂತ ಮಹತ್ವದ್ದೆನ್ನಿಸುತ್ತದೆ. ಶರಣರೆಂಬ ವಿಚಾರಪುರುಷರು 'ಸಕಲ ಜೀವಾತ್ಮರಿಗೆ ಲೇಸ ಬಯಸುವವನೇ ಕುಲಜ' ಎಂದು ದಿಟ್ಟತನದಿಂದ ವ್ಯಾಖ್ಯಾನಿಸಿದ ಕಾಲಘಟ್ಟ ಅದು. ಶರಣರ ನೇತಾರ ಬಸವಣ್ಣನವರೆಂದು ಇಂದು ನಾವು ಗುರುತಿಸುತ್ತೇವೆಯಾದರೂ ಸ್ವತಃ ಬಸವಣ್ಣನವರೇ ಸಾರಾಸಗಾಟವಾಗಿ 'ಎನಗಿಂತ ಕಿರಿಯರಿಲ್ಲ' ಎಂದುಕೊಂಡರು, ನಮ್ರತೆಯನ್ನು ಮೆರೆದರು. ಒಂದೆಡೆ ಅವರು 'ಮಾದಾರ ಚನ್ನಯ್ಯನ ಮನೆಯ ಮಗ ನಾನಯ್ಯ' ಎಂದು ಬಣ್ಣಿಸಿಕೊಳ್ಳುವುದರ ಮೂಲಕ ಕೆಳಸ್ತರದವರೆಂದು ಸಮಾಜದ ಅನಾದರಕ್ಕೊಳಗಾದವರೆಲ್ಲರ ಹೃದಯವನ್ನು ಗೆದ್ದರು. ಸುಮಾರು ೮೫೦ ವರ್ಷಗಳ ಹಿಂದೆ ಸಂದ ಬಸವಣ್ಣನವರು ನಿಜ ಬದುಕಿಗೆ ನಡೆ ಹಾಸಿದ ಧೀಮಂತ. ಸಮಾಜದಲ್ಲಿ ಬೇರೂರಿದ್ದ ಅಂಕುಡೊಂಕುಗಳನ್ನು ನಿಷ್ಠೂರವಾದರೂ ಸರಿಯೆಂದು ಖಂಡಿಸಿದ ಕ್ರಾಂತಿವೀರ ಆತ. ಬಸವಾದಿ ಶರಣರ ಆಧ್ಯಾತ್ಮಿಕ ಚಿಂತನೆ ಯಾವ ಸರಳತೆಯನ್ನು ಮುಟ್ಟಿತೆಂದರೆ 'ಭಕ್ತ ಒಂದು ಕುಲ, ಭವಿ ಒಂದು ಕುಲ– ಇವೆರಡೇ ಕುಲಗಳು. ಭಗವತ್‌ಭಾವದಿಂದ ವಿಶಾಲ ಮನೋಭಾವನೆಯುಳ್ಳವರೇ ಭಕ್ತರು, ಕೇವಲ ಪ್ರಾಪಂಚಿಕ ವಿಷಯಗಳಿಂದ ಸಂಕುಚಿತ ಮನಸ್ಸುಳ್ಳವರೇ ಭವಿಗಳು..' ಎಂಬ ವ್ಯಾಖ್ಯೆ ಮನೆಮಾತಾಯಿತು. ಆತ್ಮಕಲ್ಯಾಣ ಸಾಧಿಸಿಕೊಳ್ಳಲು ಅನರ್ಹರಾದವರು ಯಾರೂ ಇಲ್ಲ, ಎಲ್ಲರೂ ತಂತಮ್ಮ ಶಕ್ತಿ, ಶ್ರದ್ಧೆ, ಸಾಮರ್ಥ್ಯಕ್ಕನುಗುಣವಾಗಿ ಅಮೃತತ್ವದತ್ತ ಸಾಗಬಹುದು. ಇದಕ್ಕೆ ಶುದ್ಧವೂ, ಪ್ರಾಮಾಣಿಕವೂ ಆದ ಹೃದಯ ಬೇಕು, ಪರರಿಗೆ ಕೇಡು ಬಯಸದಂಥಹ ಸಂಸ್ಕಾರ ಬೇಕು.

ಬಸವಾದಿ ಶರಣರ ಆಶಯ ಮಾನವರೆಲ್ಲರೂ ಶಿಸ್ತಿನ ಜೀವನ ನಡೆಸಬೇಕು, ಪರಸ್ಪರ ಸಹಕಾರ, ಅನುಕಂಪ, ದಯೆ, ಮೂಲ ಮಂತ್ರವಾಗಬೇಕು, ತನ್ಮೂಲಕವೇ ಜನ್ಮ ಸಾರ್ಥಕ್ಯ ಸಾಧಿಸಬೇಕು. ವಚನ ಎಂದರೆ ಮಾತು–ಒಳ್ಳೆಯ ಮಾತು. ಸರಳ ಶಬ್ದಗಳನ್ನು ಬಳಸಿ ಏನೆಲ್ಲ ದಿವ್ಯ ಜೀವನ ಸೂತ್ರಗಳನ್ನು ಸಾದರಪಡಿಸಬಹುದು ಎನ್ನುವುದನ್ನು ಶರಣರು ಮಾಡಿ ತೋರಿಸಿದರು, ನುಡಿದಂತೆ ನಡೆದರು. ಇಲ್ಲೊಂದು ಮುಖ್ಯ ಸಂಗತಿಯೆಂದರೆ ಅವರು ಲೌಕಿಕವನ್ನು ಎಂದೂ ತಿರಸ್ಕರಿಸದೆ ಆಧ್ಯಾತ್ಮವನ್ನು ಅಪ್ಪಿಕೊಂಡಿದ್ದು, ಸಂಸಾರದಲ್ಲಿದ್ದುಕೊಂಡೇ ಆಧ್ಯಾತ್ಮ ಸಾಧನೆ ಸಾಧ್ಯ, ಇಹವನ್ನು ಧಿಕ್ಕರಿಸಿ ಪರವನ್ನು ಅರಸಿ ಹೊರಡುವುದು ಸಲ್ಲದೆಂದರು ಶರಣರು. ಅವರಿಗೆ ಮರ್ತ್ಯಲೋಕವೇ ಕರ್ತಾರನ ಕಮ್ಮಟವಾಗುತ್ತದೆ, ಇಲ್ಲಿ ಸಂದರೆ ಅಲ್ಲಿಯೂ ಸಲ್ಲುವುವೆಂಬ ದೃಢವಿಶ್ವಾಸ ಮೂಡುತ್ತದೆ.

ಬಸವಣ್ಣನವರ ವಿಚಾರಪರತೆ, ವೈಜ್ಞಾನಿಕ ದೃಷ್ಟಿಕೋನ, ಸಾರ್ವಕಾಲಿಕವಾದುದು. ಬದುಕಿನಲ್ಲಿ ಇಂಥಹವುಗಳಿಗೆ ಶುಭ, ಅಶುಭ ಎಂದಿಲ್ಲವೇ ಇಲ್ಲ. ನಮ್ಮ ಮನಸ್ಸಿದ್ದ ಹಾಗೆ ಕ್ಷಣಗಳು ಒದಗಿ ಬಂದಾವು. ಗೊಣಗಿದರೆ ಅದೇ ಕಹಿಗಳಿಗೆ, ಸಂಯಮ ತಳೆದು ವರ್ತಿಸಿದರೆ ಅದೇ ಸಿಹಿಗಳಿಗೆ. ಇಂದಿನ ದಿನವೇ ಶುಭ ದಿನವೆನ್ನಿ ಎಂದರು ಅವರು;

*'ಎಮ್ಮವರು ಬೆಸಗೊಂಡರೆ ಶುಭಲಗ್ನವೆಂದೆನ್ನಿರಯ್ಯ*
*ರಾಶಿ–ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯ*
*ನಾಳಿನದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ*
*ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ*
*ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ'*

ನಮ್ಮ ಮನಸ್ಸಿನ ದೌರ್ಬಲ್ಯವನ್ನು ಕಾಲಕ್ಕೆ ಆರೋಪಿಸುವುದು, ಯಾವ ನ್ಯಾಯ ಎಂದು ಪ್ರಶ್ನಿಸಿದರು ಬಸವಣ್ಣನವರು. 'ದೇವರು' ಎಂಬ ಪರಿಕಲ್ಪನೆಯನ್ನು ಅರ್ಥವತ್ತಾಗಿ ಬಳಸಿಕೊಂಡರು. ಅಂಬಿಗರ ಚೌಡಯ್ಯ ಒಂದೆಡೆ 'ಶುದ್ಧವಾಗಿ ಪಾರ್ತನ ಹೃದಯದಲ್ಲಿ ದೇವನಿಹನು' ಎನ್ನುತ್ತಾನೆ. ಇಂದಿಗೂ ಜಾತಿಯೆಂಬ ಪೆಡಂಭೂತ ತನ್ನ ತಾಂಡವವನ್ನು ಮೆರೆಯುತ್ತಲೇ ಇರುವುದು ದುರ್ದೈವವೇ ಸರಿ. ಬಸವಣ್ಣನವರು ಆ ಕಾಲದಲ್ಲಿ ಕೀಳರಿಮೆಯುಳ್ಳವರನ್ನು ಹಲವೊಮ್ಮೆ ಹುರಿದುಂಬಿಸಿದ್ದಕ್ಕೆ ಅವರ ಉದಾತ್ತ ವಚನಗಳೇ ಸಾಕ್ಷಿಯಾಗಿವೆ. 'ನಿಮ್ಮನ್ನು ಯಾರಾದರೂ ಕುಲ, ಗೋತ್ರ, ವಿಚಾರಿಸಿದರೆ ಶರಣರೆನ್ನಿ, ನೀವೇಕೆ ತಲೆ ತಗ್ಗಿಸುತ್ತೀರಿ, ಹೆಮ್ಮೆಪಡಿ' ಎಂದು ಅಸ್ಪೃಶ್ಯರೆಂದು ನಿಂದಿಸಲ್ಪಟ್ಟವರನ್ನು ಉತ್ತೇಜಿಸಿದ ಅಪ್ರತಿಮರು ಅಣ್ಣನವರು. ಅವರಿಗೂ ಕೂಡ ಜಾತಿಯ ಭೂತ ಪೂರ್ಣ ಅಳಿಯತೆಂಬ ವಿಶ್ವಾಸವಿರಲಿಲ್ಲವೆಂದು ಕಾಣುತ್ತದೆ.

*'ಉಂಬಲ್ಲಿ ಉಡುವಲ್ಲಿ ಕ್ರಿಯೆಯಳಿಯಿತೆಂಬರು*
*ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು'*

ಎಂಬ ವಚನ ಊಟೋಪಚಾರದಲ್ಲಿ ಎಲ್ಲರೂ ಒಂದಾಗುವರು, ಆದರೆ ವಿವಾಹದ ವಿಷಯ ಬಂದಾಗ ಮಾತ್ರ ಯಾವ ಜಾತಿ ಎಂದು ವಿಚಾರಿಸುತ್ತಾರೆಂದು ತಾಕೀತು ಮಾಡುತ್ತದೆ. ಆ ಅಂಧಶ್ರದ್ಧೆ, ಮೌಢ್ಯ, ಪಂಗಡ ಭೇದ, ಅಸ್ಪೃಶ್ಯತೆಗಳಂಥಹ ಸಾಮಾಜಿಕ ಅನಿಷ್ಟಗಳು ದಟ್ಟವಾಗಿದ್ದ ಕಾಲದಲ್ಲೇ ಬಸವಣ್ಣನವರು ಮಧುವರಸರ ಮಗಳಿಗೂ, ಹರಳಯ್ಯನ ಮಗನಿಗೂ ವಿವಾಹ ಮಾಡಿಸುವುದರ ಮೂಲಕ ಸಮಾನ ಧರ್ಮೀಯರಲ್ಲಿ ಮದುವೆಯಾಗುವುದು ತಪ್ಪಲ್ಲ ಎಂಬ ದೃಷ್ಟಿಯನ್ನು ಬಿತ್ತಿದರು. ಇದರಿಂದ ಮುಂದೊದಗಿದ ಪರಿಣಾಮಗಳು ಏನೇ ಇರಲಿ, ಬಸವಣ್ಣನವರ ತತ್ವನಿಷ್ಠೆ, ನಿಶಿತಮತಿ, ಪರಿವರ್ತನ ಶೀಲತೆ ಆ ಘಟನೆಯೊಂದು ಅಪೂರ್ವ ದಾಖಲೆಯಾಯಿತು. 'ಪರಮಾತ್ಮನೊಲಿದವನಿಗೆ ಕುಲವಾವುದೂ ಇಲ್ಲ ದೇವರನ್ನು ಸಾಕ್ಷಾತ್ಕರಿಸಿಕೊಂಡ ಶರಣರು ಮಾನವ ಕುಲಕ್ಕೆ ತಿಲಕಪ್ರಾಯರು" ಎನ್ನುತ್ತಾರೆ ಬಸವಣ್ಣನವರು. 'ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ' ಎಂದ ಶರಣರು ಮನುಷ್ಯನ ನಡೆನುಡಿಗಳಿಗೆ ಹೆಚ್ಚಿನ ಮಹತ್ವ ನೀಡಿದರು.

*'ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ?*
*ಕುಲವುಂಟೇ ಜಂಗಮವಿದ್ದೆಡೆಯಲ್ಲಿ?'*

ಎಂದು ಬಸವಣ್ಣನವರು ಪ್ರಶ್ನಿಸಿದರು. ಬಸವಣ್ಣನವರು ವಾಸ್ತವವಾಗಿ ಯಾರು ಆತ? ಅವನು? ..... ಎಂದರೆ ಸಿಟ್ಟಾಗುತ್ತಿದ್ದುದು ಖಚಿತ. ಕಾರಣವೆಂದರೆ 'ಇವನ್ಯಾರವ .... ಇವನ್ಯಾರವ ಎಂದೆಣಿಸಬೇಡ, ಇವನಮ್ಮವ ಎಂದೆಣಿಸು ಎಂದವರು ಒತ್ತಿ ಒತ್ತಿ ಸೂಚಿಸುತ್ತಾರೆ. ಬಸವಣ್ಣರವರಷ್ಟು ಸರಳವಾಗಿ ಜೀವನ ಸೂತ್ರವನ್ನು ರೂಪಿಸಿದ ಮಹಾತ್ಮರು ಇನ್ನೊಬ್ಬರಿಲ್ಲವೆಂದರೆ ಉತ್ಪ್ರೇಕ್ಷೆಯೇನಿಲ್ಲ. ಅಂತರಂಗ, ಬಹಿರಂಗ ಶುದ್ಧಿಗೆ ಸಾಕಲ್ಲವೆ ಇಷ್ಟು ನೇಮ? :–

'ಕಲಬೇಡ, ಕೊಲಬೇಡ, ಹುಸಿಯ ನುಡಿಯಲು
ಬೇಡ ಅನ್ಯರಿಗೆ ಅಸಹ್ಯ ಪಡಬೇಡ ತನ್ನ
ಬಣ್ಣಿಸಬೇಡ, ಇದಿರ ಹಳಿಯಲೂ ಬೇಡ
ಮುನಿಯಬೇಡ ಇದೇ ಅಂತರಂಗ ಶುದ್ಧಿ,
ಇದೇ ಬಹಿರಂಗ ಶುದ್ಧಿ'

*

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 42ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಾಂತ ಪ್ರಸಾರ ಹೊಂದಿದೆ. ದೀರ್ಘಕಾಲದ ಮುನ್ನಡೆಗೆ ಪೂಜ್ಯ ಶ್ರೀ ಶ್ರೀಗಳವರ ಸೇವೆ ತ್ಯಾಗ ಮತ್ತು ಉದಾರತೆಯಿಂದ ನೀವು ಆಜೀವ ಸದಸ್ಯತ್ವ ಪಡೆದಿರುವುದು ಆಧಾರ ಎಂದು ಭಾವಿಸಿದೆ.

'ಸಿದ್ಧಗಂಗಾ' ಮುನ್ನಡೆಗೆ ಆರ್ಥಿಕ ಪರಿಸ್ಥಿತಿ (ಹಣಕಾಸು) ಕುಂಠಿತವಾಗಿದೆ. ಇದಕ್ಕೆ ಕಾರಣ ಆಜೀವ ಮೊತ್ತದ ನಿಶ್ಚಿತ ಠೇವಣಿಯಲ್ಲಿ ಬ್ಯಾಂಕ್ ಬಡ್ಡಿದರ ಇಳಿತ, ಮತ್ತು ಪೇಪರ್ ಮುದ್ರಣ, ಅಂಚೆವೆಚ್ಚ ದುಬಾರಿಯಾಗಿರುವುದು. ಈ ಸಮಸ್ಯೆ ನಿಮ್ಮ ಗಮನಕ್ಕೆ ತರಲಾಗುತ್ತಿದೆ.

ಈ ಪರಿಣಾಮ ಆಜೀವ ಚಂದಾವನ್ನು 2004ನೇ ವರ್ಷದಲ್ಲಿ ಶ್ರೀಶ್ರೀಗಳವರ ಅನುಮತಿ ಮೇರೆಗೆ ಸಂಘ 1000/– ರೂ. ಗೆ ನಿರ್ಧರಿಸಿತು. ಈ ತೀರ್ಮಾನದಂತೆ 1000/– ರೂ.ಗೆ ಸರಿದೂಗಿಸುವಂತೆ ಹಿಂದೆ 500/–ರೂ., 600/–ರೂ ನೀಡಿ ಆಜೀವ ಸದಸ್ಯರಾಗಿದ್ದವರು ಬಾಕಿ 500/–ರೂ., 400/–ರೂ. ಸಂದಾಯ ಮಾಡುತ್ತಿದ್ದಾರೆ.

ಈ ಉಳಿಕೆ ಹಣ 500/–ರೂ., 400/ ರೂ ಸಂದಾಯ ಮಾಡದೇ ಇರುವ ಆಜೀವ ಸದಸ್ಯರುಗಳು ಈ ಬಗ್ಗೆ ದಯಮಾಡಿ ತೀವ್ರ ಗಮನ ಹರಿಸಬೇಕಾಗಿ ಕೋರುತ್ತೇವೆ. ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ ನಗದಾಗಿ / ಎಂ.ಓ. / ಚೆಕ್/ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಪತ್ರಿಕೆ ಚಿರಂಜೀವಿಯಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

# ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಗಳವರ ಶತಮಾನೋತ್ಸವ ಗ್ರಂಥ ಪ್ರಕಟನಾ ಪೂರ್ವಭಾವಿ ಸಿದ್ಧತಾ ಸಭೆ



ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಗೆ ಏಪ್ರಿಲ್೧, ೨೦೦೮ಕ್ಕೆ ನೂರು ವರ್ಷ ತುಂಬಿ ನೂರೊಂದಕ್ಕೆ ಪಾದಾರ್ಪಣೆ ಮಾಡುತ್ತಿರುವ ಶುಭಸಂದರ್ಭದಲ್ಲಿ ಶ್ರೀಮಠದಲ್ಲಿ ಅಭೂತ ಪೂರ್ವವಾದ, ಜನರ ಮನಸ್ಸಿನಲ್ಲಿ ಸದಾ ಹಚ್ಚ ಹಸಿರಾಗಿರುವಂತಹ ಸಮಾರಂಭವನ್ನು ನಡೆಸಲು ಹಲವಾರು ಪ್ರಾತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕಾರ್ಯೋನ್ಮುಖವಾಗಿದೆ.

ಶತಮಾನೋತ್ಸವ ಸಂದರ್ಭದಲ್ಲಿ ಮೌಲಿಕ ಗ್ರಂಥಗಳನ್ನು ಹೊರತರುವ ದಿಶೆಯಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ, ವಿದ್ವಾಂಸರೂ ಆದ ಶ್ರೀ ಎನ್. ಬಸವಾರಾಧ್ಯರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಸಭೆಯಲ್ಲಿ ಹಿರಿಯ ವಿದ್ವಾಂಸರಾದ ಡಾ.ಎಂ. ಚಿದಾನಂದಮೂರ್ತಿ, ಡಾ॥ ಎಂ.ಜಿ. ನಾಗರಾಜ್, ಸಾಹಿತ್ಯ ರತ್ನ ಅನ್ನದಾನಯ್ಯ ಪುರಾಣಿಕ, ಶ್ರೀ ಟಿ.ಆರ್. ಮಹಾದೇವಯ್ಯ, ಪ್ರೊ. ಹೆಚ್.ವಿ.ವೀರಭದ್ರಯ್ಯ, ಶ್ರೀ ಹೆಚ್.ಎಸ್. ಸಿದ್ದಗಂಗಪ್ಪ ಡಾ॥ ಬಿ.ಎಸ್. ಸ್ವಾಮಿ, ಪ್ರೊ. ಟಿ.ಎಸ್. ಲೋಹಿತಾಶ್ವ, ಡಾ॥ ಸಿ. ಶಿವಕುಮಾರಸ್ವಾಮಿ, ಡಾ॥ ಬಿ.ಸಿ. ವೀರಪ್ಪ, ಶ್ರೀ ಎಸ್.ಪಿನಾಕ ಪಾಣಿ, ಮುಂತಾದ ವಿದ್ವಾಂಸರು ಭಾಗವಹಿಸಿದ್ದರು. ಸಭೆಯು ಶ್ರೀ ಕೆ.ಸಿ. ಬಸಪ್ಪ ಇವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿ ಡಾ॥ ಎಂ.ಎನ್. ಚನ್ನಬಸಪ್ಪ ಅವರು ಎಲ್ಲರನ್ನೂ ಸ್ವಾಗತಿಸಿದರು. ಹಿರಿಯ ಸಾಹಿತಿಗಳಾದ ಶ್ರೀ ಟಿ.ಆರ್. ಮಹಾದೇವಯ್ಯನವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಸಭೆಯಲ್ಲಿ ನಿವೃತ್ತ ಐ.ಪಿ.ಎಸ್. ಪೋಲೀಸ್ ಅಧಿಕಾರಿ ಶ್ರೀ ಎಲ್. ರೇವಣ್ಣ ಸಿದ್ಧಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಬಿ.ಎನ್. ಚನ್ನಪ್ಪ, ಶ್ರೀ ಆರ್. ಮುದ್ದರಂಗಯ್ಯ, ಪ್ರೊ. ಬಿ. ಗಂಗಾಧರಯ್ಯ, ಶ್ರೀ ಚಕ್ರಭಾವಿಸ್ವಾಮಿಗಳು, ಶ್ರೀ ಹೆಚ್.ಬಿ. ಗಂಗಾಧರಯ್ಯ, ಶ್ರೀ ಎಂ. ಶಿವಣ್ಣ, ಡಾ॥ ಸಿ.ಜಯಣ್ಣ, ಶ್ರೀ ಜಿ.ವೀರಪ್ಪದೇವರು, ಶ್ರೀ ಆರ್. ರಂಗಹನುಮಯ್ಯ, ಶ್ರೀ ಹೆಚ್.ಡಿ. ರೇಣುಕುಮಾರ್, ಶ್ರೀ ಮಹದೇವಯ್ಯ, ಶ್ರೀ ಎಂ. ರೇಣುಕಾರಾಧ್ಯ ಮುಂತಾದ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶ್ರೀಮಠದ ಆಡಳಿತ ಮಂಡಳಿ ಸದಸ್ಯರುಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಶ್ರೀ ಪಿ.ವಿ. ಹುಚ್ಚವೀರಯ್ಯ, ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ, ಶ್ರೀ ಎಸ್. ವಿಶ್ವನಾಥ್, ಇವರು ಉಪಸ್ಥಿತರಿದ್ದರು. ಸಭೆಯಲ್ಲಿ ಶತಮಾನೋತ್ಸವ ಸಂದರ್ಭದಲ್ಲಿ ನೂರು ಕೃತಿಗಳನ್ನು, ಅಭಿನಂದನಾ ಗ್ರಂಥ, ಚಿತ್ರ ಸಂಪುಟ, ಶ್ರೀವಾಣಿ ಸಮಗ್ರ ಸಂಪುಟಗಳನ್ನು ಹೊರತರಲು ತೀರ್ಮಾನಿಸಲಾಯಿತು. ಸಭೆಯ ಕಾರ್ಯಕ್ರಮವನ್ನು ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ ನಿರೂಪಿಸಿದರು. ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಶರಣು ಸಮರ್ಪಣೆ ಮಾಡಿದರು.





# ಎಂಥ ಹಸಿವು ಬೇಕು ?

-ಟಿ.ಆರ್. ಮಹಾದೇವಪ್ಪ, ಗೌರವ ಸಂಪಾದಕರು, ಧರ್ಮಪ್ರಭ ಪತ್ರಿಕೆ,

ಸಾಮಾನ್ಯವಾಗಿ ಕೆಲವರಿಗೆ ವಯಸ್ಸು ನಲವತ್ತು ದಾಟುತ್ತಿದ್ದಂತೆ ಚಾಳೀಸು ಬೇಕು. ಅಸ್ಪಷ್ಟ ದೃಷ್ಟಿಯನ್ನು ಸರಿಪಡಿಸಲು ಮೂಗಿನ ಸಿಂಹಾಸನದ ಮೇಲೆ ಕನ್ನಡಕ ಕುಳಿತು ರಾಜ್ಯಭಾರ ಆರಂಭಿಸುತ್ತದೆ. ಮತ್ತೆ ಕೆಲವು ಕಾಲದ ನಂತರ ಕಣ್ಣಿನ ಪೊರೆ ಬಲಿಯತೊಡಗಿ ಆಪರೇಷನ್ ಅಗತ್ಯ ವಾಗುತ್ತದೆ. ಶಸ್ತ್ರಕ್ರಿಯೆ ಹಾಗೂ ಔಷಧೋಪಚಾರದಿಂದ ಮೊದಲಿನಂತೆ ಚುರುಕು ದೃಷ್ಟಿ ಬಾರದಿದ್ದರೂ, ಮೊದಲಿಗಿಂತ ಈಗ ವಾಸಿ ಎಂದು ಹೇಳುವಷ್ಟರ ಮಟ್ಟಿಗೆ ಕಾಣುತ್ತವೆ.

'ಸರ್ವೇಂದ್ರಿಯಾಣಿ ನಯನಂ ಪ್ರಧಾನಂ' ಎಂಬ ಮಾತು ನಿಜ. ಕಣ್ಣಿಲ್ಲದವರ ಬದುಕನ್ನು ನೆನೆದರೇ ದಿಗಿಲಾಗುತ್ತದೆ. ನಮಗೆ ಒಂದಲ್ಲ ಎರಡು ಕಣ್ಣಿವೆ ಲೋಕವನ್ನು ಸರಿಯಾಗಿ ನೋಡಲಿ, ಪೂರ್ಣವಾಗಿ ಗ್ರಹಿಸಲಿ ಎಂದು. ಆದರೆ ಬಹಳ ಜನ ಸರಿಯಾಗಿ ನೋಡುವುದಿಲ್ಲ. ಲೋಕಜೀವನವನ್ನು ಸರಿಯಾಗಿ ನೋಡಲಿಲ್ಲವೆಂದ ಮೇಲೆ ಅದನ್ನು ಗ್ರಹಿಸುವ ಮಾತು ದೂರವೇ ಉಳಿಯಿತು. ಅವರು ಕಣ್ಣಿದ್ದೂ ಕುರುಡರು. ಅವರದು ಒಂದು ಬಗೆಯ ಕುರುಡುಜೀವನ. ಇಂಥವರು ನಮ್ಮ ಸುತ್ತಮುತ್ತ ಕಾಣಸಿಗುತ್ತಾರೆ. ನೋಡಿದರೆ ಆಶ್ಚರ್ಯವಾಗುತ್ತದೆ.

ಇದು ಹೊರಗಿನ ಕಣ್ಣಿನ ಭೌತಿಕ ದೃಷ್ಟಿಯ ಮಾತಾಯಿತು. ಪ್ರತಿಯೊಬ್ಬರಿಗೂ ಒಳಗಣ್ಣು ಒಂದಿದೆ. ಅದನ್ನು ಅಂತಃಚಕ್ಷು ಎನ್ನುತ್ತಾರೆ. ಅದು ಎಷ್ಟೆಷ್ಟು ಚುರುಕಾಗಿರುತ್ತದೆ. ಅಷ್ಟಷ್ಟೂ ಮನುಷ್ಯ ಜ್ಞಾನಾನುಭವಗಳ ಗಣಿಯಾಗುತ್ತಾನೆ. ಮಾಹಿತಿ ಕೋಶವಾಗುತ್ತಾನೆ. ದುರ್ದೈವವೆಂದರೆ ಕೆಲವರಿಗೆ ಈ ಒಳಗಣ್ಣೂ ಮುಚ್ಚಿಕೊಂಡಿರುತ್ತದೆ. ಪರಿಣಾಮವಾಗಿ ಅವರು ಬುದ್ಧಿಗುರುಡರಾಗಿ, ಭಾವನೆಯ ಎಳವರಾಗಿ ಬದುಕುತ್ತಾರೆ. ಭೌತಿಕ ಕುರುಡಿಗಿಂಟ ಮನೋನಯನದ ದೃಷ್ಟಿ ಮಾಂದ್ಯ ಹೆಚ್ಚು ಅಪಾಯಕಾರಿ. ಇದು ಬರೀ ವ್ಯಕ್ತಿಗೆ ಮಾತ್ರ ಕೇಡುಂಟುಮಾಡುವುದಿಲ್ಲ, ಸಮಾಜದ ಸ್ವಾಸ್ಥ್ಯಕ್ಕೂ ಧಕ್ಕೆ ಉಂಟು ಮಾಡುತ್ತದೆ. ಬುದ್ಧಿಯು ವಸ್ತುಸ್ಥಿತಿಯನ್ನು ಗ್ರಹಿಸದೆ ಅನೇಕ ಅರ್ಥಗಳಿಗೆ ಕಾರಣವಾಗುತ್ತದೆ.

ಹೀಗೆ ಮನುಷ್ಯನ ಒಳಗಣ್ಣಿಗೆ ಪೊರೆ ಬಂದರೆ ಏನು ಮಾಡುವುದು? ಹೊರಗಿನ ಕಣ್ಣುಗಳ ಪೊರೆಯನ್ನು ನೇತ್ರವೈದ್ಯರು ಶಸ್ತ್ರಕ್ರಿಯೆಯಿಂದ ತೆಗೆಯುತ್ತಾರೆ. ಆಧುನಿಕ ವ್ಯವಸ್ಥೆ ಬಹಳ ಮುಂದುವರೆದಿದೆ. ಕೆಲವೇ ಸಮಯದಲ್ಲಿ ಕಣ್ಣಿನ ಪೊರೆ ತೆಗೆದು ಕ್ರಮವಾಗಿ ಔಷಧಿ ಹಾಕಲು ಹೇಳಿ ಮನೆಗೆ ಕಳುಹಿಸುತ್ತಾರೆ. ಆದರೆ ಒಳಗಣ್ಣಿನ ಚಿಕಿತ್ಸೆ ಮಾಡುವವರು ಯಾರು ? ಇದು ಹೊರಕಣ್ಣಿನ ಆಪರೇಷನ್ನಷ್ಟು ಸುಲಭಸಾಧ್ಯವಲ್ಲ. ಇದಕ್ಕೆ ಭವರೋಗ ವೈದ್ಯರು ಬೇಕು. ಅಂತಃಚಕ್ಷುವಿನ 'ಕಣ್ತೆರೆಸುವ' ಕೆಲಸವನ್ನು ಜೀವನದ ಒಂದು ಘಟನೆ ಮಾಡಬಹುದು. ಒಬ್ಬ ಗುರು, ಒಬ್ಬ ಆತ್ಮೀಯ ಗೆಳೆಯ ನಿರ್ವಹಿಸಬಹುದು. ಜೀವನದಲ್ಲಿ ಅವನು ಕಂಡುಂಡ ಅನುಭವವೇ ಅವನಿಗೆ ಗುರುವಾಗಿ ಅರಿವಿನ ಕಣ್ತೆರೆಸಬಹುದು. ಬಾಳಿನಲ್ಲಿ ಆವರಿಸಿದ ಅಜ್ಞಾನದ ಕತ್ತಲೆಯನ್ನು ನಿವಾರಿಸಿ ಸುಜ್ಞಾನದ ಬೆಳಕನ್ನು ಗ್ರಹಿಸುವ ಋಜುದೃಷ್ಟಿ ಒದಗಬಹುದು. ಆಗ ಆತ ಲೋಕಜೀವನವನ್ನು ಸರಿಯಾಗಿ ಗ್ರಹಿಸುತ್ತಾನೆ; ತದನುಸಾರ ಸ್ಪಂದಿಸುತ್ತಾನೆ. ಇದು ಅವನಿಗೆ ಒದಗುವ ದೊಡ್ಡ ಉಪಕಾರ. ಆದ್ದರಿಂದ ಹೊರಗಿನ ಕಣ್ಣೂ ಸರಿಯಾಗಿ ಕಂಡರಷ್ಟೆ ಸಾಲದು. ಒಳಗಣ್ಣು ತೆರೆದಿರುವಂತೆ ಜಾಗೃತಿ ವಹಿಸಬೇಕು.

## ಸೋಮೇಶ್ವರ ಶತಕ

*ಅದರಿಂ ನೀತಿಯೆ ಸಾಧನಂ ಸಕಲ ಲೋಕಕ್ಕಾಗ*
*ಬೇಕೆಂದು ಪೇ ।*
*ಳಿದ ಸೋಮಂ ಸುಜನರ್ಕಳೀ ಶತಕದೊಳ್*
*ತಪ್ಪಿರ್ದೊಡಂ ತಿದ್ದಿ ತೋ ॥*
*ರ್ಪುದು ನಿಮ್ಮುತ್ತಮ್ಮ ಸದ್ಗುಣಂಗಳ*
*ಜಗದ್ವಿಖ್ಯಾತಮಂ ಮಾಳ್ಪುದಾ ।*
*ಮುದದಿಂ ನಿಮ್ಮವನೆಂಬುದೈ ಹರ ಹರಾ ಶ್ರೀ ಚೆನ್ನ*
*ಸೊಮೇಶ್ವರಾ ॥*

ಆದಕಾರಣ ಸಕಲರಿಗೂ ನೀತಿಯು ಸಹಾಯವಾಗ ಬೇಕೆಂದು ಸೋಮನೆಂಬ (ಕವಿಯಾದ) ನಾನು ಈ ಸೋಮೇಶ್ವರ ಶತಕವನ್ನು ರಚಿಸಿದೆನು. ಇದರಲ್ಲಿ ತಪ್ಪುಗಳಿದ್ದರೆ, ಸಜ್ಜನರು ಅವನ್ನು ತಿದ್ದಿ ತೋರಿಸಿ ತಮ್ಮ ಸದ್ಗುಣಗಳನ್ನು ಲೋಕದಲ್ಲಿ ಹರಡಬೇಕಲ್ಲದೆ ನಾನು ಅವರಲ್ಲಿ ಸೇರಿದವನೇ ಎಂದು ಭಾವಿಸಬೇಕು.

# ಶರಣ ಶಂಕರ ದಾಸಿಮಯ್ಯನ ಕರ್ಮಭೂಮಿ ಹುನಗುಂದ ಸಮೀಪದ ನವಿಲೆ ಜಡೆಶಂಕರ ದೇವಾಲಯ

– ಮುಂದುವರೆದ ಲೇಖನ

– ಜಯದೇವಪ್ಪ ಜೈನಕೇರಿ, ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ-೧.

ಹನ್ನೆರಡನೇ ಶತಮಾನದಲ್ಲಿ ನಡೆದ ಸಮಾಜೋ ಧಾರ್ಮಿಕ ಶರಣ ಕ್ರಾಂತಿಗೆ ಹಿನ್ನಲೆಯಾಗಿ ಬಸವಣ್ಣನಿಗೆ ಪೂರ್ವದಲ್ಲಿ ಅಥವಾ ಹಿರಿಯ ಸಮಕಾಲೀನರಾಗಿ ಅನೇಕ ಶರಣರು ಕಂಡು ಬರುತ್ತಾರೆ. ಬಸವಣ್ಣನ ವಿಚಾರ ಕ್ರಾಂತಿಗೆ ಭೂಮಿಕೆಯನ್ನು ಸಿದ್ಧಪಡಿಸಿದ ಶರಣರಲ್ಲಿ ಡಕ್ಕೆಯ ಮಾರಯ್ಯ, ಡೋಹರ ಕಕ್ಕಯ್ಯ, ಮಾದಾರ ಚನ್ನಯ್ಯ, ಜೇಡರ ದಾಸಿಮಯ್ಯ, ಶಂಕರ ದಾಸಿಮಯ್ಯ ಮುಂತಾದವರು ಪ್ರಮುಖರಾಗಿದ್ದಾರೆ. ಇವರೆಲ್ಲರೂ ೧೧ನೇ ಶತಮಾನದ ಉತ್ತರಾರ್ಧ ಮತ್ತು ೧೨ನೇ ಶತಮಾನದ ಪೂರ್ವಾರ್ಧದಲ್ಲಿ ಇದ್ದವರು. ಈ ಬಸವ ಪೂರ್ವ ಶರಣರಲ್ಲಿ ಪ್ರಮುಖರಾದವರು ಶರಣ ಶಂಕರ ದಾಸಿಮಯ್ಯನವರು. ಲಿಂಗಸುಗೂರು ತಾ. ಕಂದಗಲ್ಲು(ಸ್ಕಂದ ಶಿಲೆ) ಎಂಬ ಊರಲ್ಲಿ ಗೋವಿಂದ ಭಟ್ಟ ಮತ್ತು ದುಮ್ಮವ್ವೆ ಎಂಬ ಶೈವ ಬ್ರಾಹ್ಮಣ ದಂಪತಿಗಳಿದ್ದರು. ಈ ದಂಪತಿಗಳಿಗೆ ಕಾಶಿಯಾತ್ರೆ ಮಾಡಿ ವಿಶ್ವನಾಥನ ದರ್ಶನ ಪಡೆಯಬೇಕೆಂಬ ಬಯಕೆ ಉಂಟಾಯಿತು. ಕಾಲುನಡಿಗೆಯಲ್ಲಿ ಹೊರಟು ದಾರಿಯಲ್ಲಿ ಪವಿತ್ರವಾದ ಕೃಷ್ಣಾನದಿ ದಂಡೆಯಲ್ಲಿದ್ದ ನವಿಲೆ ಎಂಬ ಗ್ರಾಮಕ್ಕೆ ಬರುತ್ತಾರೆ. ಅಲ್ಲಿನ ಪ್ರಾಚೀನ ಜಡೆ ಶಂಕರ ದೇವಾಲಯವನ್ನು ಪ್ರವೇಶಿಸಿ ಅಲ್ಲಿ ನಡೆಯುತ್ತಿದ್ದ ವಿಶೇಷ ಪೂಜಾದಿಗಳನ್ನು ವೀಕ್ಷಿಸಿ ಭಕ್ತಿ ಸಂಪನ್ನರಾದ ದಂಪತಿಗಳು ಅಲ್ಲಿಯೇ ಉಳಿದು ಜಡೆ ಶಂಕರನ ದರ್ಶನ ಪಡೆದರು. ಇಷ್ಟೊಂದು ,ವೈಭವದ ಶಿವನ ದರ್ಶನ ಮಾಡಿದ ದಂಪತಿಗಳಿಗೆ ಕಾಶಿ ಪ್ರಯಾಣ ಬೇಡವೆನಿಸಿತು, ಅಲ್ಲಿರುವ ವಿಶ್ವನಾಥ ಇಲ್ಲಿಯೇ ಇದ್ದಾನೆಂಬ ಭಾವನೆ ತಳೆದರು. ಪ್ರತಿದಿನವೂ ತಮ್ಮ ಊರಿನಿಂದ ಬಂದು ಜಡೆಯ ಶಂಕರನನ್ನು ಮನದಣಿಯೆ ಪೂಜಿಸುತ್ತಿದ್ದರು. ಕಾಲಕ್ರಮೇಣ ಅವರು ತಮ್ಮ ಊರನ್ನು ತೊರೆದು ನವಿಲೆಯಲ್ಲಿಯೇ ನೆಲೆಸಲು ನಿಶ್ಚಯಿಸಿದರು. ಜಡೆ ಶಂಕರನ ಪ್ರೇರಣೆಯಂತೆ ದಂಪತಿಗಳು ಇಷ್ಟಲಿಂಗ ಧಾರಿಗಳಾಗಿ, ಶಂಕರ ದಾಸಿಮಯ್ಯ, ಶಿವದಾಸಿ ಎಂಬ ಹೆಸರಿನಿಂದ ಕಾಯಕ ನಿರತರಾಗಿ, ಜಂಗಮ ದಾಸೋಹ ನಡೆಸಲು ಆರಂಭಿಸಿದರು.

ಅವರ ನಿಷ್ಕಳಂಕ ಭಕ್ತಿಗೆ ಮೆಚ್ಚಿದ ಜಡೆಯ ಶಂಕರ ಸ್ವಾಮಿ ದರುಶನ ನೀಡಿ ಆಧ್ಯಾತ್ಮಿಕ ಜ್ಞಾನದ ಬೆಳಕು ತೋರುತ್ತಾನೆ. ಶಂಕರ ದಾಸಿಮಯ್ಯನವರ ಹೃದಯದಲ್ಲಿ ಹರ್ಷದ ಹಾಲ್ಗಡಲು ಉಕ್ಕಿತು. ಹಗಲಿರುಳು ಶಂಕರನ ಸೇವೆಯಲ್ಲಿ ತನ್ಮಯರಾಗಿ ಬಿಟ್ಟರು. ಜಡೆ ಶಂಕರನಿಂದ ಪಡೆದ ಉನ್ನತ ಜ್ಞಾನದಿಂದ ಜನರಲ್ಲಿ ಶಂಕರಲಿಂಗನ ಮಹಿಮೆಯನ್ನು ಪ್ರಚಾರ ಮಾಡುತ್ತಾ ಹೊಸ ಬಾಳನ್ನು ಹಸನಾಗಿ ನಡೆಸುತ್ತಾ ಬಂದರು. ಕಾಯಕ ಮಾಡಿರಿ, ಅಹಂ ಭಾವವನ್ನು ತೊರೆಯಿರಿ, ಭಕ್ತಿಮಾರ್ಗದಲ್ಲಿ ನಡೆಯಿರಿ, ದಾಸೋಹ ಮಾಡಿರಿ, ಲಿಂಗ ದೇಹಿಗಳೆಲ್ಲರನ್ನು ಸಾಕ್ಷಾತ್ ಶಿವನೆಂದೇ ತಿಳಿಯಿರಿ. ಅತಿಥಿಗಳ ಸತ್ಕಾರವನ್ನು ಮಾಡಿರಿ, ಸತ್ಯವಂತರಾಗಿರಿ, ಸುಳ್ಳನ್ನು ತ್ಯಜಿಸಿರಿ, ಪರನಿಂದೆ ಮಾಡದಿರಿ, ಸದ್ಭಕ್ತರ ಸಂಗವನ್ನು ಮಾಡಿರಿ, ಎಂಬ ಬೋಧನೆ ಮಾಡುತ್ತಾ ಶರಣ ಜೀವನ ಸಾಗಿಸುತ್ತಿದ್ದರು. ಏಕದೇವೋಪಾಸಕರಾದ ಶಂಕರ ದಾಸಿಮಯ್ಯ ದಂಪತಿಗಳು ತಮ್ಮ ಸುತ್ತ ನಡೆಯುವ ಹಲವು ದೇವರುಗಳ ಪೂಜೆ ಮತ್ತು ಕ್ಷುದ್ರ ದೇವತೆಗಳಿಗೆ ಬಲಿಕೊಡುವ ಪದ್ಧತಿಗಳಿಂದ ನೊಂದರು. ಇವುಗಳನ್ನು ನಿಗ್ರಹಿಸುವ ಶಕ್ತಿಗಾಗಿ ಜಡೆ ಶಂಕರಲಿಂಗನಲ್ಲಿ ಪ್ರಾರ್ಥಿಸಿದರು. ಅನುಗ್ರಹೀತರಾದ ಶಂಕರ ದಾಸಿಮಯ್ಯನವರು ದೇವರನ್ನು ಕುರಿತ ವಿಚಾರಗಳನ್ನು ಮೂಢ ನಂಬಿಕೆಗಳನ್ನು ತಿಳಿಯಪಡಿಸಲು ಯತ್ನಿಸಿದನು. ಈ ಕಾರ್ಯದಲ್ಲಿ ಅವರಿಗೆ ವಕ್ರಪಾದನೆಂಬುವನು ಸಹಾಯಕನಾದನು.

ಸೂಜಿ ಕಾಯಕದಿಂದ ಬಂದ ಹಣದಿಂದ ಜೀವನ ಸಾಗಿಸುತ್ತಾ ಜೊತೆಗೆ ವಕ್ರಪಾದನು ಪ್ರತಿನಿತ್ಯ ತರುತ್ತಿದ್ದ ಐದು ಮೊರ ಭಿಕ್ಷೆಯಿಂದ ಜಂಗಮ ದಾಸೋಹವನ್ನು ತಪ್ಪದೆ ನಡೆಸುತ್ತಿದ್ದರು. ವಕ್ರಪಾದನು ಒಮ್ಮೆ ಜೋಳದ ಭಿಕ್ಷಕ್ಕೆ ಹೋದಾಗ ಮನೆಯವರು ಶಂಕರ ಗಂಡ ಪಿರಿದಯ್ಯ ಎಂದು ಹಂಗಿಸಿದ ಸಂಗತಿ ತಿಳಿದ ಶಂಕರದಾಸಿಮಯ್ಯನವರು ನೊಂದು,





ಅಂದಿನಿಂದ ಜೋಳ ತಿನ್ನುವುದನ್ನು ಬಿಟ್ಟುಬಿಡುತ್ತಾರೆ. ಬಸವ ಪೂರ್ವ ಯುಗದಲ್ಲಿ ಶಂಕರ ದಾಸಿಮಯ್ಯನವರು ವೀರಶೈವ ಮತ ಪ್ರಸಾರದ ಮಣಿಹವನ್ನು ಸಮರ್ಥವಾಗಿ ನಡೆಸುತ್ತಾ ನವಿಲೆಯ ಜಟಾಶಂಕರನ ಆರಾಧನೆಯಲ್ಲಿ ಭಕ್ತಿಯಿಂದ ಜೀವನ ನಡೆಸುತ್ತಿದ್ದರು. ಇದೇ ಸಂದರ್ಭದಲ್ಲಿ ಮುದನೂರಿನ ಸಮಕಾಲೀನ ಶರಣ ದೇವರ ದಾಸೀಮಯ್ಯನೂ ಸಹ ವೀರಶೈವ ಮತ ಪ್ರಸಾರ ಕಾರ್ಯದಲ್ಲಿ ತೊಡಗಿ ದಾಸೋಹ ನಡೆಸುತ್ತ ಪ್ರಸಿದ್ಧಿ ಪಡೆದಿದ್ದನು. ಅಸಂಖ್ಯಾತರಿಗೆ ದಾಸೋಹ ಮಾಡಿದರೂ ಖಾಲಿಯಾಗದ ಆತನ ಭಂಡಾರವೂ ಪ್ರಸಿದ್ಧವಾಗಿತ್ತು. ಎಲ್ಲಾ ಮಾನವರಿಗೂ ಸಹಜವಾಗಿರುವಂತೆ ದೇವರ ದಾಸಿಮಯ್ಯನಿಗೂ ತನ್ನ ಧಾನ್ಯ ಭಂಡಾರದ ಸಾಮರ್ಥ್ಯದ ಕುರಿತು ಅಭಿಮಾನ ಹೆಮ್ಮೆ ಇದ್ದಿತು. ಆತನ ದಾಸೋಹದ ಹೆಮ್ಮೆಯನ್ನು ಆತನಿಗೆ ಅರಿವು ಮೂಡಿಸುವ ಸಲುವಾಗಿ ಶಂಕರ ದಾಸಿಮಯ್ಯನವರು ಆತನಲ್ಲಿಗೆ ಬರುತ್ತಾರೆ.

ಮುದೇನೂರಿಗೆ ಬಂದ ಶಂಕರದಾಸಿಮಯ್ಯನವರು ಎಂದಿನಂತೆ ವಕ್ರಪಾದನನ್ನು ಭಿಕ್ಷೆ ತರಲು ಹೇಳಿದರು. ಆಗ ದೇವರ ದಾಸಿಮಯ್ಯನವರು ನನ್ನಲ್ಲಿ ಬೇಕಾದಷ್ಟು ಧಾನ್ಯವಿದೆ ಆರೋಗಣೆಗೆ, ಎಷ್ಟು ಧಾನ್ಯ ಬೇಕಾದರೂ ತನ್ನ ತವನಿಧಿಯಿಂದ (ಭಂಡಾರ) ಪಡೆಯಬಹುದೆಂದು ಆಢ್ಯತೆಯಿಂದ ನುಡಿಯುತ್ತಾನೆ. ನಿಜ ದಾಸಯ್ಯನವರೇ ನೀವು ತವನಿಧಿವುಳ್ಳ ಸಿರಿವಂತರು, ನಾವು ಕಾಯಕದಿಂದ ದುಡಿದು, ಭಿಕ್ಷೆಯಿಂದ ದಾಸೋಹ ವ್ರತ ಕೈಗೊಂಡವರು. ಏನು ಮಾಡುವುದು ನಮ್ಮ ಶಂಕರನೂ ತಿರುಕನೇ, ನಿಮ್ಮ ದಾನಗುಣ ದೊಡ್ಡದು, ನಮ್ಮೂರ ಒಕ್ಕಲಿಗರೂ ಧಾನ್ಯ ಬೆಳೆಯುತ್ತಾರೆ. ಅವರು ಬೇಡಿದವರಿಗೆ ಮಾತ್ರ ಕೊಡುತ್ತಾರೆ. ನೀವಾದರೂ ಬೇಡದೇ ಕೊಡುವವರು. ನಿಮ್ಮ ತವನಿಧಿಯ ಮಹಿಮೆಯನ್ನು ನಾವು ಕೇಳಿದ್ದೇವೆ ಎಂದ ಶಂಕರ ದಾಸಿಮಯ್ಯನವರ ಮಾತಿನಿಂದ ಏನೋ ಅಚಾತುರ್ಯವಾಯಿತೆಂದು ಆತಂಕದಿಂದ ದೇವರ ದಾಸಿಮಯ್ಯನವರು ಪತ್ನಿ ದುಗ್ಗಳೆಯೊಂದಿಗೆ ಆಗಮಿಸಿ, ಶಂಕರ ದಾಸಿಮಯ್ಯನವರ ಕ್ಷಮೆಕೇಳಿ ತನ್ನ ಅವಿವೇಕದಿಂದಾದ ಅಚಾತುರ್ಯವನ್ನು ಒಪ್ಪಿಕೊಳ್ಳುತ್ತಾರೆ. ತವನಿಧಿಯಿಂದಾಗಿ ತನ್ನಲ್ಲುಂಟಾದ ಹಮ್ಮು ಅಹಂಕಾರವನ್ನು ತೊರೆದು ಶಂಕರ ದಾಸಿಮಯ್ಯನವರ ಅಡಿಗೆರಗುತ್ತಾನೆ. ಶಂಕರ ದಾಸಿಮಯ್ಯನವರು ತಂಗಿದ್ದ ಮನೆಯಲ್ಲೇ, ವಕ್ರಪಾದ, ಶಿವದಾಸಿಯರು ಪ್ರಸಾದ ಸಿದ್ಧಗೊಳಿಸಿದರು. ನಂತರ ಶಂಕರದಾಸಿಮಯ್ಯನವರ ಆದೇಶದಂತೆ ಆ ಮನೆಯ ಅಂಗಣವನ್ನು ಅಗೆದಾಗ ಅಲ್ಲಿ ಚಿನ್ನದ ಪಾತ್ರೆಗಳು, ಹರಿವಾಣಗಳು, ತಟ್ಟೆಗಳೂ, ದೀಪ ಸ್ತಂಭಗಳೂ ಕಂಡು ಬಂದವು. ಇದರಿಂದ ದೇವರ ದಾಸಿಮಯ್ಯ ದಂಪತಿಗಳು ಶರಣ ಶಂಕರ ದಾಸಿಮಯ್ಯನ ಶಕ್ತಿಗೆ ಮಣಿಯುತ್ತಾರೆ. ನಂತರ ನೆರೆದ ನೂರಾರು ಭಕ್ತರಿಗೆ ದಾಸೋಹ ನಡೆಸುತ್ತಾರೆ. ದಾಸೋಹ ಪ್ರಸಾದ ನಂತರ ಪರಮಾನಂದ ಭರಿತರಾಗಿ ದೇವರ ದಾಸಿಮಯ್ಯ ದಂಪತಿಗಳು ಧನ್ಯತೆಯ ಭಾವ ತಳೆಯುತ್ತಾರೆ. ಈ ರೀತಿ ಸಮಕಾಲೀನ ಜನಜೀವನದಲ್ಲಿ ವಿಚಾರ ಕ್ರಾಂತಿಯನ್ನು ಬಿತ್ತುತ್ತಾ ಮೂಢನಂಬಿಕೆಗಳ ವಿರುದ್ಧ ಜನರನ್ನು ಎಚ್ಚರಿಸುತ್ತಾ ಶಂಕರ ದಾಸಿಮಯ್ಯನವರು ಕಾಯಕ ದಾಸೋಹ ನಿರತರಾದರು. ಕಲ್ಯಾಣರಾಜ್ಯದಲ್ಲಿ ಜೈನರು ತುಂಬಾ ಪ್ರಭಾವಶಾಲಿಗಳಾಗಿದ್ದರು. ಜಯಸಿಂಹ ಎಂಬುವನು ಕಲ್ಯಾಣದ ರಾಜನಾಗಿದ್ದನು. ಶಂಕರ ದಾಸಿಮಯ್ಯನವರ ಕಾಯಕ ದಾಸೋಹ, ಶಿವಭಕ್ತಿ ಪ್ರಸಾರ ಕಾರ್ಯಕ್ಕೆ ತಡೆಹಾಕಬೇಕೆಂದು ಕೆಲವರು ರಾಜನಲ್ಲಿ ದೂರಿದರು. ರಾಜನು ಶಂಕರ ದಾಸಿ ಮಯ್ಯನವರನ್ನು ಆಸ್ಥಾನಕ್ಕೆ ಹಾಜರಾಗಲು ಹೇಳಿ ಕಳಿಸಿದನು. ರಾಜನ ಆಜ್ಞೆಯಂತೆ ಕಲ್ಯಾಣಕ್ಕೆ ಆಗಮಿಸಿದ ಶಂಕರದಾಸಿ ಮಯ್ಯನವರು ವಕ್ರಪಾದನೊಂದಿಗೆ ಆಸ್ಥಾನದಲ್ಲಿ ನೆರೆದ ಜೈನ ಮತ್ತು ವೈಷ್ಣವರನ್ನು ವಾದದಲ್ಲಿ ಸೋಲಿಸಿದರು. ಶಂಕರ ದಾಸಿಮಯ್ಯನವರ ವಿದ್ವತ್ತಿಗೆ ರಾಜ ಜಯಸಿಂಹ ಶರಣಾಗಿ ಅವರನ್ನು ಗೌರವದಿಂದ ಬೀಳ್ಕೊಡುತ್ತಾನೆ. ಈ ರೀತಿ ತನ್ನ ವಿರೋಧಿಗಳನ್ನು ನಿಗ್ರಹಿಸಿದ ಶಂಕರದಾಸಿಮಯ್ಯನವರು ತಮ್ಮ ಅನುಯಾಯಿಗಳೊಂದಿಗೆ ಉಜ್ಜಯಿನಿಗೆ ಹೊರಟು ಅಲ್ಲಿ ಮಹಾಕಾಳಿಯೇ ಪರಮದೈವವೆಂದು ವಾದಿಸಿದ ಶಾಕ್ತೆಯರನ್ನು ವಾದದಲ್ಲಿ ಸೋಲಿಸಿ, ಶಿವನೇ ಸರ್ವೋತ್ತಮನೆಂದು ಸಿದ್ಧಪಡಿಸಿದರು.

ಮಹಾರಾಷ್ಟ್ರದ ಪಂಬೇರ ಎಂಬಲ್ಲಿರುವ ಪ್ರಸಿದ್ಧ ಮೈಲಾರ ದೇವಾಲಯಕ್ಕೆ ಬಂದು ಅಲ್ಲಿನ ಭಕ್ತರಿಗೆ ಶರಣ ತತ್ವ, ಕಾಯಕದ ಮಹತ್ವವನ್ನು ತಿಳಿಯಪಡಿಸಿದರು. ಸ್ವಗ್ರಾಮಕ್ಕೆ ಹಿಂದಿರುಗುವ ದಾರಿಯಲ್ಲಿ ಸಿದ್ಧರು, ನಾಥಪಂಥಿಗಳನ್ನು ವಾದದಲ್ಲಿ ಸೋಲಿಸಿ ಅವರಿಗೆ ಶಂಕರನ ಪಾರಮ್ಯವನ್ನು ತಿಳಿಸಿ ಅವರನ್ನು ಶರಣರನ್ನಾಗಿಸುತ್ತಾರೆ. ನವಿಲೆಗೆ ಬಂದ ಶಂಕರದಾಸಿಮಯ್ಯ ದಂಪತಿಗಳು ಎಂದಿನಂತೆ ಜಡೆಯ ಶಂಕರನ ದರ್ಶನ ಪಡೆದು ಭಕ್ತಿಯಿಂದ ಕಾಯಕ ದಾಸೋಹ ನಿರತರಾಗುತ್ತಾರೆ. ಭಕ್ತರು ನೀಡಿದ ಧಾನ್ಯದಿಂದ ದಾಸೋಹ ಮುಂದುವರೆಸುತ್ತಾರೆ. ಕಾಲಾಂತರದಲ್ಲಿ ಶಂಕರದಾಸಿಮಯ್ಯ ದಂಪತಿಗಳಿಗೆ ಸದ್ಯೋಜಾತನೆಂಬ ಒಬ್ಬ ಮಗ ಜನಿಸುತ್ತಾನೆ. ಶಿವಾಚಾರದ ಸದಾಚಾರವನ್ನು ಬಿತ್ತಿದ್ದಲ್ಲದೆ, ಅನೇಕ ಪವಾಡಗಳನ್ನು ಮೆರೆದ ಉಲ್ಲೇಖ ಶಂಕರ ದಾಸಿಮಯ್ಯನವರ ಪುರಾಣಗಳಲ್ಲಿ ಕಂಡು ಬರುತ್ತದೆ. ಪವಾಡಗಳ ಸತ್ಯತೆ ಏನೇ ಇದ್ದರೂ ಅವರು ಅಂದಿನ ಸಮಾಜದಲ್ಲಿ ವಿಶೇಷವಾಗಿದ್ದ ಅನಾಚಾರ, ಹಿಂಸೆ, ಬಲಿ, ಕ್ಷುದ್ರ ದೈವ ಪೂಜೆ, ಮೂಢನಂಬಿಕೆಗಳ ವಿರುದ್ಧ ಜನರಲ್ಲಿ ವಿವೇಕವನ್ನು ವೈಚಾರಿಕ ಚಿಂತನೆಯನ್ನು ಬಿತ್ತುವ ಕಾರ್ಯವನ್ನು ಸಮರ್ಥವಾಗಿ ನಡೆಸಿರುವುದು ಕಂಡು ಬರುತ್ತದೆ. ಬಸವ ಪೂರ್ವದ ವಚನಕಾರರಲ್ಲಿ ಶಂಕರ ದಾಸಿಮಯ್ಯನವರೂ ಒಬ್ಬರು ಇವರ ಆರು ವಚನಗಳು ಮಾತ್ರ ಇದುವರೆಗೆ ದೊರಕಿವೆ. ಅವುಗಳಲ್ಲಿ 5 ವಚನಗಳು ಮಾತ್ರ ಸಂಕೀರ್ಣ ವಚನ ಸಂಪುಟದಲ್ಲಿ ಪ್ರಕಟವಾಗಿವೆ. ಅಖಿಲ ಭಾರತ ವಿರಶೈವ ಬಣಗಾರ ಸಮಾಜ ಪ್ರಕಟಿಸಿರುವ 'ಚೇತನ' ಸ್ಮರಣ ಸಂಚಿಕೆಯಲ್ಲಿ 6ನೇ ವಚನ ಪ್ರಕಟವಾಗಿದೆ. ಈತನ ವಚನದ ಅಂಕಿತನಾಮ **ನಿಜಗುರುಶಂಕರದೇವ**

5ನೇ ವಚನದ ವಿಸ್ತೃತ ರೂಪವೇ 6ನೇ ವಚನವಾಗಿರುವುದನ್ನು ಕಾಣಬಹುದು.

ಮಾನವ ತನ್ನ ಉದರ ತುಂಬಿಸಿಕೊಳ್ಳುವುದಕ್ಕಾಗಿ ಒಂದಲ್ಲ ಒಂದು ಕಾಯಕದಲ್ಲಿ ತೊಡಗಿಕೊಳ್ಳುತ್ತಾನೆ. ಜೀವನೋಪಾಯಕ್ಕಾಗಿ ಆತನು ಕೃಷಿಕಾಯಕ, ಕಸುಬು ಉದ್ಯೋಗಗಳನ್ನು ಆಶ್ರಯಿಸುತ್ತಾನೆ. ದುಡಿಮೆಗೆ ಮಹತ್ವ ಮತ್ತು ಗೌರವವನ್ನು ತಂದುಕೊಟ್ಟವರು ೧೨ನೇ ಶತಮಾನದ ಶರಣರು, ಕಾಯಕ ತತ್ವ ಒಂದು ಸಾಮಾಜಿಕ ಮೌಲ್ಯ ಪಡೆದುಕೊಂಡದ್ದು ಶರಣರಿಂದ, ಕಾಯಕದಲ್ಲಿ ದೇವರನ್ನು ಕಂಡವರು ಶರಣರು. ಜೊತೆಗೆ ಲೌಕಿಕ ಬದುಕಿನಲ್ಲಿ ಪಾರಮಾರ್ಥಿಕ ಸ್ವರೂಪವನ್ನು ಗುರುತಿಸಿದರು. ಹಾಗೆಯೇ ಕಾಯಕವೇ ಕೈಲಾಸ ಎಂದು ಸಾರಿದರು. ಕಾಯಕವು, ಸತ್ಯ ಶುದ್ಧ ಕಾಯಕವಾಗಬೇಕು, ಎಂಬ ಜೀವನದ ಆದರ್ಶ ತತ್ವಗಳಿಗೆ ಪ್ರಮುಖ ಸ್ಥಾನ ನೀಡಿದವರು ಶರನರು, ಕಾಯಕದಲ್ಲಿ ನಿರತರಾದಾಗ, ಗುರು, ಲಿಂಗ, ಜಂಗಮರ ಹಂಗು ತೊರೆಯಬೇಕು ಎಂದು ಹೇಳಿದ ಶರಣರು, ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆಯಿಂದ ಕಾಯಕವನ್ನೇ ಕೈಲಾಸವಾಗಿಸಿಕೊಂಡವರು. ಕಾಯಕ ಜೀವಿಗೆ ಸಂಗ್ರಹ ಬುದ್ಧಿ ಇರಬಾರದು, ಬದಲಾಗಿ ದಾಸೋಹ ಬುದ್ಧಿ ಬೆಳೆಸಿಕೊಳ್ಳಬೇಕು. ಸಂಗ್ರಹಿಸುವ, ಕೂಡಿಡುವ ಸಂಸ್ಕೃತಿಯ ಜನಾಂಗಕ್ಕೆ ಕಾಯಕ ತತ್ವ, ದಾಸೋಹ ಶಬ್ದಗಳು ಒಪ್ಪಿತವಾಗಲಾರವು. ಆಯಾದಿನವೇ ದುಡಿದು, ಹೆಚ್ಚಾದುದನ್ನು ಸಹಜೀವಿಗಳೊಂದಿಗೆ ಹಂಚಿಕೊಂಡು ಉಣ್ಣುವ ಮನುಷ್ಯ, ನೆಮ್ಮದಿಯ ಜೀವನವನ್ನು ತನ್ನದಾಗಿಸಿಕೊಳ್ಳುತ್ತಾನೆ. ಏನಕೇನ ಪ್ರಕಾರೇಣ ಸಂಪತ್ತನ್ನು ಗಳಿಸಿ, ಸಂಗ್ರಹಿಸಿ, ದಾಸೋಹ ಮಾಡದೇ ಶ್ರೀಮಂತಿಕೆಯಿಂದ ಮೆರೆಯುವ ಮನುಷ್ಯ ಮಾನಸಿಕ ನೆಮ್ಮದಿಯಿಂದ ವಂಚಿತನಾಗುತ್ತಾನೆ. **'ಬಡತನಕ್ಕೆ ಉಂಬುವ ಚಿಂತೆ'**, ಒಂದೇ ಆದರೆ ಸಿರುವಂತನಿಗೆ ನಾನಾ ಚಿಂತೆಗಳು, ಗಳಿಸಿದ್ದನ್ನು ಕಾಪಾಡುವ, ಇನ್ನಷ್ಟು, ಮತ್ತಷ್ಟು ಸಂಗ್ರಹಿಸುವ ಚಿಂತೆ, ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ ಎಂಬಂತೆ ಅಪ್ರಾಮಾಣಿಕತೆ, ಅನ್ಯಾಯದಿಂದ ಗಳಿಸಿ, ಬಚ್ಚಿಟ್ಟ ಧನದಿಂದ ಮನಸ್ಸಿನ ನೆಮ್ಮದಿ ಹಾಳಾಗುತ್ತದೆ. ಇದರಿಂದಾಗಿ ದುಶ್ಚಟಗಳಿಗೆ ದಾರಿಯಾಗಿ ಕುಟುಂಬ ಜೀವನ ಅಧೋಗತಿಗೆ ಇಳಿಯುತ್ತದೆ. ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ ಎಂಬ ಮಾತಿನಂತೆ, ಸಂಗ್ರಹ ಬುದ್ಧಿಯಿಂದ ದಾಸೋಹ ಮಾಡದೇ ಉಳಿಸಿದ ಹಣ ಒಳ್ಳೆಯ ಕಾರ್ಯಗಳಿಗೆ ಬಳಸದ ಹಣ, ಮನಸ್ಸಿನ ನೆಮ್ಮದಿಯನ್ನು ಕೆಡಿಸುತ್ತದೆ. ದೇಹ ಮನಸ್ಸುಗಳನ್ನು ದಂಡಿಸಿ ಸತ್ಯಶುದ್ಧ ಕಾಯಕದಿಂದ, ಗಳಿಸಿದ ಧನವನ್ನು ಸತ್‌ಕಾರ್ಯಗಳಿಗೆ ಒಳ್ಳೆಯ ಮನಸ್ಸಿನಿಂದ ಬಳಸಿ ನೆಮ್ಮದಿ ಪಡೆಯಿರಿ ಎನ್ನುತ್ತಾರೆ ಶರನರು. ಕಾಯಕದಲ್ಲಿ ಮೇಲು ಕೀಳು ಸಲ್ಲದು, ಜಾತಿ-ಭೇದ, ವರ್ಗಭೇದ, ವರ್ಣಬೇಧ ಸಲ್ಲದು. ಸ್ತ್ರೀಪುರುಷರೆಲ್ಲರೂ ಹುಟ್ಟಿನಿಂದ ಸಮಾನರು ಎಂದು ಸಮಾನತೆಯ ಹೊಸಬೆಳಕನ್ನು ನೀಡಿ ಸ್ತ್ರೀಯರಿಗೂ ಧಾರ್ಮಿಕ ಸ್ವಾತಂತ್ರ್ಯ ನೀಡಿ ಜೀವನದ ಸಾರ್ಥಕತೆಯನ್ನು ಜನಮಾನಸದಲ್ಲಿ ಬಿತ್ತಿದವರು ಶರಣರು, ಸ್ತ್ರೀಯರಿಗೂ, ಮನಸ್ಸಿದೆ, ವ್ಯಕ್ತಿತ್ವವಿದೆ, ಧಾರ್ಮಿಕ ಸ್ವಾತಂತ್ರ್ಯವಿದೆಯೆಂದು ಬಲವಾಗಿ ಪ್ರತಿಪಾದಿಸಿದವಳು ೧೨ನೇ ಶತಮಾನದ ಶರಣೆ ಅಕ್ಕಮಹಾದೇವಿ. ಇಂದಿಗೂ ಅಕ್ಕ ಸ್ತ್ರೀವಾದಿ ಸಂವೇದನೆಗಳಿಗೆ ಸ್ಫೂರ್ತಿಯಾಗಿದ್ದಾಳೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಕ್ಕನ ವಚನಗಳು ಸ್ತ್ರೀಕುಲದ ಮಾರ್ಗದರ್ಶಿಯಾಗಿವೆ. ವೈಚಾರಿಕ ಚಿಂತನೆಯ ಪ್ರಾಮಾಣಿಕ ಸಂಕೇತವಾಗಿ ಅಕ್ಕನ ವಚನಗಳು ಇಂದಿಗೂ ಆದರ್ಶವಾಗಿವೆ.

ಶಂಕರ ದಾಸಿಮಯ್ಯನ ಚಾರಿತ್ರಿಕ ಸಂಗತಿಗಳು, ಶಂಕರ ದಾಸಿಮಯ್ಯನ ರಗಳೆ, ಪುರಾಣ, ತೆಲುಗು ಮತ್ತು ಕನ್ನಡ ಬಸವಪುರಾಣ, ಚನ್ನಬಸವಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಭೈರವೇಶ್ವರ ಕಾವ್ಯಗಳಲ್ಲಿ ಉಲ್ಲೇಖವಾಗಿವೆ. ಈತನ ಸ್ಥಳ ಬಿಜಾಪುರ ಜಿಲ್ಲೆ ಹುನಗುಂದ (ತಾ) ಕಂದಗಲ್ಲು ಈಗಿನ ಇಳಕಲ್ಲು ಎಂದೂ ತಿಳಿದು ಬರುತ್ತದೆ. ಇದುವರೆಗೆ ಶಂಕರ ದಾಸಿಮಯ್ಯನವರ ೫೫ ವಚನಗಳು ಮಾತ್ರ ವಚನ ಸಂಪುಟಗಳಲ್ಲಿ ದಾಖಲಾಗಿದೆ. ಎಲ್ಲಾ ವಚನಗಳೂ ಜೀವನದ ಶ್ರೇಷ್ಠ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ. ಈತನ ಅಂಕಿತ ಶಂಕರದೇವ. ಆರನೇ ವಚನವು ಚೇತನ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿದೆ.

***ಎನ್ನ ಕಾಯಕ್ಕೆ ಗುರುವಾದನಯ್ಯ ಬಸವಣ್ಣನು, ಎನ್ನ***
***ಪ್ರಾಣಕ್ಕೆ ಪ್ರಸಾದವಾದನಯ್ಯಾ ಮರುಳ ಶಂಕರದೇವನು***
***ಎನ್ನ ಜ್ಞಾನಕ್ಕೆ ಜಂಗಮವಾದನಯ್ಯಾ ಪ್ರಭುದೇವರು,***
***ಇಂತಿವರ ಕರುಣದಿಂದಲಾನು ಬದುಕಿದೆನಯ್ಯಾ***
***ನಿಜಗುರು ಶಂಕರದೇವಾ***

ಎಂಬ ವಚನದಲ್ಲಿ ತಾನೊಬ್ಬ ಹಿರಿಯ ಶರಣನಾದರೂ ತನಗಿಂತ ಕಿರಿಯರಾದ, ಅನುಭಾವದಲ್ಲಿ ಹಿರಿಯರಾದ ಬಸವಣ್ಣ, ಚನ್ನಬಸವಣ್ಣ ಮರುಳ ಶಂಕರದೇವ ಪ್ರಭುದೇವರನ್ನು ನೆನೆದು ಅವರ ಕರುಣದಿಂದ ನಾನು ಬದುಕಿದೆ ಎನ್ನುವ ಶಂಕರದಾಸಿಮಯ್ಯನವರ ಕಿಂಕರತ್ವ ಅನುಕರಣೀಯವಾಗಿದೆ. ಆತನ ಆಧ್ಯಾತ್ಮದ ಔನ್ನತ್ಯವನ್ನು ತಿಳಿಯಪಡಿಸುತ್ತದೆ. **ಅರಿದಡೆ ಶರಣ, ಮರೆದಡೆ ಮಾನವ** ಎಂಬ ಶಂಕರದಾಸಿಮಯ್ಯನವರ ಜೀವನ ಸಿದ್ಧಾಂತ ಆದರ್ಶಪೂರ್ಣವಾಗಿದೆ. ಸಂಗನ ಬಸವಣ್ಣನ ಕರುಣದಿಂದ, ಕೃಪೆಯಿಂದ ಪ್ರಭುದೇವರ ಶ್ರೀಪಾದವ ಕಂಡೆನು, ನಿರಾಳವ ಕಂಡು ಬದುಕಿದೆನು ಎನ್ನುವ ಶಂಕರದಾಸಿಮಯ್ಯನವರು ಬದುಕಿನ ನಿಜದ ನಿಲುವನ್ನು ಅರಿತ ಮಹನುಭಾವಿಯಾಗಿ ಕಾಣಿಸಿಕೊಳ್ಳುತ್ತಾರೆ. ಈತನ ವಚನಗಳು ಸರಳವಾಗಿ ಸ್ಪಷ್ಟತೆಯಿಂದ ಕೂಡಿ ಮಹತ್ವದ್ದಾಗಿವೆ. ವಿಷಯ ಸಂಗ್ರಹಣ ಮತ್ತು ಅಭಿವ್ಯಕ್ತಿ ಕೌಶಲ್ಯದಿಂದ ಅತ್ಯಂತ ಗಮನಾರ್ಹವಾಗಿದೆ.

*







# ವಿಶ್ವದ ಮಹಿಳಾ ಅನುಭಾವಿಗಳು

ಮಾಲಿಕೆ – ೬

## 'ಕಾಶ್ಮೀರದ ಯೋಗಿನಿ ಲಲ್ಲೇಶ್ವರಿ'

– ಡಾ|| ಕೆ.ಎಸ್. ರತ್ನಮ್ಮ,
ಪ್ರಾಂಶುಪಾಲರು,
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ,
ಮೈಸೂರು-೫೭೦ ೦೦೯,.

ಶೈವ ಧರ್ಮದ ಸನಾತನ ತತ್ವ ಅದ್ವೈತ ತತ್ವ, ಆತ್ಮ ಪರಮಾತ್ಮ ಎರಡೂ ಒಂದೇ. ಪ್ರಪಂಚವು ಪರಿವರ್ತನಶೀಲ. ಆದರೆ ಪರಮಾತ್ಮನೊಬ್ಬನೇ ಶಾಶ್ವತ ಸತ್ಯ. ಆತ ಸರ್ವವ್ಯಾಪಿ. ಸರ್ವಾಂತರ್ಯಾಮಿ. ವಿಶ್ವದ ಅವಲಂಬನ ಶಕ್ತಿಯಾದರೂ ವಿಶ್ವಾತೀತ- ಎಂಬ ಶೈವಧರ್ಮದ ತತ್ವವನ್ನು ತನ್ನ ಅನುಭಾವಿಕ ಸೂಳ್ನುಡಿಗಳ ವಾಕ್ಯಗಳಲ್ಲಿ ತಿಳಿಯ ಹೇಳಿ ಜನಮನವನ್ನು ತಿದ್ದಿದ ಶಾಶ್ವತ ತತ್ವದ ಅರ್ಥವನ್ನು ತಿಳಿಸಿ, ಬದುಕನ್ನು ಬೆಳಗುವ ಅನುಭಾವಿಕ ಜಗತ್ತಿನ ದಂತ ಕಥೆಯಾಗಿದ್ದಾಳೆ ಕಾಶ್ಮೀರದ ಶೈವ ಸಂತ ಮಹಿಳೆ ಲಲ್ಲಯೋಗೀಶ್ವರಿ.

ಪ್ರಾಚೀನಕಾಲದ ಎಲ್ಲ ಸಂತರಂತೆ ಲಲ್ಲೇಶ್ವರಿಯ ಜೀವನದ ಬಗ್ಗೆ ಹೆಚ್ಚು ವಿವರಗಳು ದೊರಕುವುದಿಲ್ಲ. ಸುಮಾರು ಕ್ರಿ.ಶ. ಹದಿನಾಲ್ಕನೆಯ ಶತಮನದಲ್ಲಿ ಇದ್ದಿರಬಹುದಾದ ಈ ಕವಿಯತ್ರಿಯನ್ನು ಆಗಿನ ಕಾಲದ ಜನ ಅತ್ಯಂತ ಪ್ರೀತಿಯಿಂದ ಲಾಲ್ ದೀದಿ, ಲಾಲ್ ದಿದ್ದಿ ಎಂದು ಕರೆಯುತ್ತಿದ್ದರು. ಶೈವ ಸಂಪ್ರದಾಯಕ್ಕೆ ಸೇರಿದ ಪಂಡಿತ ವಂಶದಲ್ಲಿ ಹುಟ್ಟಿದಳು. ಲಲ್ಲೇಶ್ವರಿ ಜನರ ಪ್ರೀತಿಪಾತ್ರಳಾಗಿ, ಪ್ರಸಿದ್ಧಳಾದ ಬದುಕಿನ ಐತಿಹಾಸಿಕ ಅಂಶಗಳಿಗಿಂತ ದಂತಕಥೆಗಳೇ ಹೆಚ್ಚು. ಕಾಶ್ಮೀರದ ಜನರ ಮನೆಮಾತಾಗಿ ಹಾಸುಹೊಕ್ಕಂತೆ ಇರುವ ಲಲ್ಲೇಶ್ವರಿಯ ಬಗ್ಗೆ ಪ್ರಚಲಿತ ದಂತ ಕಥೆ. ಜಾನಪದ ಸಾಹಿತ್ಯ ಮತ್ತು ಆಕೆಯ ಬರಹಗಳಿಗಿಂತ ಜೀವನ ಚಿತ್ರವನ್ನು ಕಲ್ಪಿಸಬಹುದಾಗಿದೆ.

ಶ್ರೀನಗರದ ಆಗ್ನೇಯಕ್ಕೆ ನಾಲ್ಕು ಮೈಲಿ ದೂರದಲ್ಲಿರುವ ಪಂಡ್ರೆಸ್ತಾನ್ ಪಟ್ಟಣದಲ್ಲಿ ಶೈವ ಕಾಶ್ಮೀರಿ ಪಂಡಿತರ ಮನೆಯಲ್ಲಿ ಜನಿಸಿದಳು. ಇವಳ ಜನನಕ್ಕೆ ಸಂಬಂಧಿಸಿದ ಪೌರಾಣಿಕ ಕಥೆ ಈ ರೀತಿಯಲ್ಲಿ ಪ್ರಚಲಿತವಾಗಿದೆ. ಹಿಂದಿನ ಜನ್ಮದಲ್ಲಿ ಕಾಶ್ಮೀರದಲ್ಲಿ ಹೆಣ್ಣಾಗಿ ಹುಟ್ಟಿ ಪಂಡ್ರೆಸ್ತಾನ್‌ನಲ್ಲಿದ್ದ ಪುರುಷನೊಂದಿಗೆ ವಿವಾಹವಾಗಿ ಒಂದು ಗಂಡುಮಗುವಿನ ತಾಯಿ ಆಗುತ್ತಾಳೆ. ಮಗುವಿನ ನಾಮಕರಣದ ದಿನ ಕುಲ ಪುರೋಹಿತ ಸಿದ್ಧ ಶ್ರೀಕಂಠರನ್ನು ಆಕೆ 'ಈ ಮಗುವಿಗೂ ನನಗೂ ಏನು ಸಂಬಂಧ ? ಎಂದು ಪ್ರಶ್ನಿಸಿದಾಗ ಆತ 'ಎಂಥ ವಿಚಿತ್ರ ಪ್ರಶ್ನೆ ಆತ ನಿನ್ನ ಮಗ ಎಂದರೆ ಈಕೆ 'ಅಲ್ಲ' ಎನ್ನುತ್ತಾಳೆ. 'ಹಾಗಾದರೆ ಈ ಮಗು ಮತ್ತಾರು?' ಎಂದು ಕೇಳಲು, ಆಕೆ 'ನಾನಿನ್ನೇನು ಸಾಯುತ್ತೇನೆ. ಇಂತಹ ಊರಿನಲ್ಲಿ ಕೆಲವು ಗುರುತುಗಳೊಂದಿಗೆ ಹೆಣ್ಣು ಕುದುರೆಯಾಗಿ ಹುಟ್ಟುತ್ತೇನೆ. ಆಗ ಈ ಪ್ರಶ್ನೆಗೆ ಉತ್ತರಿಸುತ್ತೇನೆ' ಎಂದು ಹೇಳಿ ಸತ್ತುಹೋದಳು. ಆ ಪುರೊಹಿತ ನಿಗಧಿತ ಸ್ಥಳಕ್ಕೆ, ನಿಗಧಿತ ಸಮಯಕ್ಕೆ ಹೋಗಿ ಅದನ್ನೆ ಕೇಳಿದಾಗ ಆ ಕುದುರೆಯು 'ನಾನು ಇನ್ನೇನು ಸಾಯುತ್ತೇನೆ, ನಾಯಿಮರಿಯಾಗಿ ಹುಟ್ಟುತ್ತೇನೆ, ಎಂದಿತು. ಆತ ನಾಯಿ ಮರಿಯ ಬಳಿ ಕೇಳಿದಾಗ ಅದೂ ಕೂಡಾ, ಅದೇ ಮಾತನ್ನು ಹೇಳಿ ಪ್ರಾಣ ಬಿಡುತ್ತದೆ. ಇದರಿಂದ ಬೇಸತ್ತ ಪುರೋಹಿತ ತನ್ನ ಹುಡುಕಾಟವನ್ನು ನಿಲ್ಲಿಸಿಬಿಟ್ಟನು. ಹೀಗೆ ಪ್ರಾಣಿ ಪ್ರಪಂಚದಲ್ಲಿ ಆರು ಜನ್ಮಗಳನ್ನು ಪಡೆದ ಈ ಆತ್ಮ ಮನುಷ್ಯ ಜನ್ಮದಲ್ಲಿ ಲಲ್ಲೇಶ್ವರಿಯಾಗಿ ಹುಟ್ಟಿ ಪೂರ್ವಜನ್ಮದಲ್ಲಿ ತಾನು ಜನ್ಮ ನೀಡಿದ್ದ ಅದೇ ಹುಡುಗನೊಂದಿಗೆ ವಿವಾಹವಾದಳು. ಅದೇ ಪುರೋಹಿತ ಮದುವೆ ಮಾಡಲು ಬಂದಿದ್ದ ಮತ್ತು ಅದೇ ಸಮಯದಲ್ಲಿ ಆಕೆ ತನ್ನ ರಹಸ್ಯವನ್ನು ಬಹಿರಂಗಪಡಿಸಿದಳು. ಮದುವೆಯಾಗುವ ಸಮಯದಲ್ಲಿ ಲಲ್ಲೇಶ್ವರಿಗೆ ಹನ್ನೆರಡು ವರ್ಷ, ಗಂಡಿಗೆ ಮೂವತ್ತು ವರ್ಷವಾಗಿತ್ತು. ಆತ ದೊಡ್ಡ ಮನುಷ್ಯನಾಗಿ ಬೆಳೆದಿದ್ದ. ಪಂಪುರ (ಪದ್ಮಾಪುರ)ದ ನಿಚಾಬಾತ್ ಎಂಬ ಪಂಡಿತವಂಶದ ಸಿದ್ಧನಮಗ. ಮಾವ ಈಕೆಗೆ ಪದ್ಮಾವತಿ ಎಂದು ನಾಮಕರಣ ಮಾಡುತ್ತಾನೆ.

ಈ ಪೌರಾಣಿಕ ಕಥೆಯಲ್ಲಿ ನೀತಿ ಅಡಗಿದೆ. ಆತ್ಮಜ್ಞಾನಿಗಳಿಗೆ ಮಾತ್ರ ಪೂರ್ವಜನ್ಮದ ನೆನಪು ಆಗುತ್ತದೆ. ತಾನಾರು? ಎಂಬುದನ್ನು ಅರಿತ ಆತ್ಮಜ್ಞಾನಿಗಳಿಗೆ ಮಾತ್ರ ಈ ರೀತಿ ಪೂರ್ವಜನ್ಮದ ವೃತ್ತಾಂತ ನೆನಪಿಗೆ ಬರಲು ಸಾಧ್ಯ. ಭೂಮಿಯ ಮೇಲಿನ ಬದುಕು ಹೇಗೆ ಕ್ಷಣಿಕವೋ ಹಾಗೆಯೇ ಪ್ರಪಂಚದ ಸಂಬಂಧಗಳಿಗೆ ಶಾಶ್ವತ ಮೌಲ್ಯಗಳಿರುವುದಿಲ್ಲ ಎಂಬ ಸತ್ಯದ ಅರಿವು ಲಲ್ಲಳ ಬದುಕಿನಲ್ಲಿದೆ.

ವಿವಾಹದ ನಂತರ ಲಲ್ಲಳ ಬದುಕು ಸುಖ ಕಾಣಲಿಲ್ಲ. ಗಂಡನ ಮಲತಾಯಿಯ ಅತ್ತೆ ಸಹಿಸಲಸಾಧ್ಯ ತೊಂದರೆಗಳನ್ನು ಕೊಡುತ್ತಿದ್ದರೂ ಲಲ್ಲೆ ಕ್ಷಮಾಮೂರ್ತಿಯಾಗಿ ಎಲ್ಲ ಕ್ರೂರ ಹಿಂಸೆಗಳನ್ನೂ ನಗುನಗುತ್ತ ಸಹಿಸಿಕೊಂಡು ಹನ್ನೆರಡು ವರ್ಷಗಳು ಸಂಸಾರ ಮಾಡಿದಳು. ಅತ್ತೆಯ ಕಾಟ ಕಡಿಮೆಯಾಗಲೇ ಇಲ್ಲ. ಕೊನೆಗೆ ರೋಸಿ ಹೋದ ಲಲ್ಲೇಶ್ವರಿ ತಾಳ್ಮೆ ಕಳೆದುಕೊಂಡು ಮನೆ ಬಿಟ್ಟು ಹೊರಟಳು. ಮೊದಲೇ

ವೈರಾಗ್ಯ ಮನೋಭಾವ ಆವರಿಸಿದ್ದ ಆಕೆ ಶಾಂತಿಯನ್ನರಸಿ ದೇಶ ಸಂಚಾರ ಹೊರಟಳು.

ಆರಾಧ್ಯದೈವ ಶಿವನಲ್ಲದೆ ತನಗೆ ಮತ್ತಾರು ಇಲ್ಲ ಎಂದರಿತ ಲಲ್ಲೇಶ್ವರಿ ಪ್ರಾಣದೊಡೆಯನನ್ನು ಹುಡುಕುತ್ತ ಬರುವಾಗ ಶೈವ ಸಂತ ಸೆದ್‌ಬಾಯ್ ಗುರುವಾಗಿ ದೊರತದ್ದು ಆಕೆಗೆ ಕುಲಗುರು ಸಿದ್ಧನಾಥನೇ ದೊರೆತಂತೆ ಎನಿಸಿದೆ. ಪಾಂಪುರದ ವಾಸಿಯಾಗಿದ್ದ ಈತ ಶೈವ ಧರ್ಮ ಸಂಸ್ಥಾಪಕ ವಸುಗುಪ್ತ ಶಿಷ್ಯ ಪರಂಪರೆಯಲ್ಲಿ ಬಂದವನೂ, ಅವಳಿಗೆ ಹಿಂದಿನ ಜನ್ಮದಿಂದಲೂ. ಗುರುವಾಗಿದ್ದನಂತೆ. ಆತನ ಮಾರ್ಗದರ್ಶನದಲ್ಲಿ ಯೋಗಾಭ್ಯಾಸ ಮಾಡಿ, ಆಧ್ಯಾತ್ಮ ಪ್ರಪಂಚದಲ್ಲಿನ ವಾದ ವಿವಾದಗಳಲ್ಲಿ, ಆಧ್ಯಾತ್ಮ ವಿದ್ಯೆಯಲ್ಲಿ ತನ್ನ ಗುರುವನ್ನು ಮೀರಿಸುತ್ತಾಳೆ. ಗುರುವಿನ ಬೋಧನೆಯಿಂದ ಪ್ರಸಿದ್ಧ ಬ್ರಹ್ಮವಾದಿನಿ ವೇದಕಾಲದ ಗಾರ್ಗಿಯಂತೆ ಪ್ರಸಿದ್ಧಳಾಗಿ ಶೈವ ಶಿವಯೋಗಿನಿಯಾದಳು.

ದೇಶಸಂಚಾರ ಮಾಡುತ್ತ ಲಲ್ಲೇಶ್ವರಿ ಜನಮನವನ್ನು ತಿದ್ದುತ್ತ ಅವರಲ್ಲಿದ್ದ ಅಂಧ ಶ್ರದ್ಧೆ, ಗೊಡ್ಡು ಸಂಪ್ರದಾಯವನ್ನು ನಿವಾರಿಸತೊಡಗಿದಳು. ಅಶುದ್ಧ ಮನಸ್ಸು, ದುರಾಶೆ, ಆಮಿಷ ಗಳಿಂದ ದೂರವಿರಲು ಆಧ್ಯಾತ್ಮಿಕ ಮಾರ್ಗದಲ್ಲಿ ಜನರನ್ನು ತೊಡಗಿಸಲು ಸಾಹಸ ಮಾಡಿದಳು. ಜನರಿಗೆ ನೀತಿ ಮತ್ತು ಧರ್ಮಭೋಧೆ ಮಾಡುತ್ತಾ, ಹಾಡುತ್ತಾ, ಕುಣಿಯುತ್ತಾ ಶಿವಾನಂದದಲ್ಲಿ ತೇಲುತ್ತಿದ್ದ ಶಿವಯೊಗಿನಿಯ ಬಗ್ಗೆ ಅಸಂಖ್ಯ ಕಥೆಗಳು ಹುಟ್ಟಿಕೊಂಡು ಪ್ರಚಾರವಾಗಿವೆ. ಲಲ್ಲವಾಕ್ಯಾನಿ ಎಂದೇ ಪ್ರಸಿದ್ಧ ವಾಗಿದ್ದ ದೈವಗೀತೆಗಳನ್ನು ಹಾಡಿದ್ದು ಕಾಶ್ಮೀರದ ಮನೆ ಮನೆಗಳಲ್ಲೂ ಶಾಶ್ವತವಾಗಿ ಉಳಿದಿದೆ.

ಲಲ್ಲೇಶ್ವರಿಯು ಅಕ್ಕಮಹಾದೇವಿಗೂ ಅನೇಕ ಸಾಮ್ಯಗಳಿವೆ. ಲೋಕನಿಂದೆಗೆ ಅಂಜದೆ ತನ್ನ ಮಾನಸಿಕ ಸಮತೋಲನ ಕಳೆದುಕೊಳ್ಳದೆ ಏಕಾಂಗಿಯಾಗಿ ಶಿವನನ್ನು ಅರಸುತ್ತ ಸಾಗಿದವರು ಈ ಇಬ್ಬರು ಅನುಭಾವಿ ಸಂತ ಮಹಿಳೆಯರು. ಅಕ್ಕಮಹಾದೇವಿ ಅಸಂಖ್ಯ ವಚನಗಳನ್ನು ಬರೆದಂತೆ ಈಕೆ 'ಲಲ್ಲ ವಾಕ್ಯಾನಿ' ಎಂಬ ಆಧ್ಯಾತ್ಮ ಗೀತೆಗಳನ್ನು ಅಸಂಖ್ಯವಾಗಿ ರಚಿಸಿದ್ದಾಳೆ. ಶಾಸ್ತ್ರಾನುಸಂಧಾನ, ಸಂತ ಚಿಂತನ, ಆತ್ಮಾನುಸಂಧಾನಗಳ ಮೂಲಕ 'ನಾನೆಂಬ' ಅಹಂಕಾರವನ್ನು ನಿರಸನಗೊಳಿಸಿ ಎರಡಳಿದು ಒಂದಾಗಿ ಶಿವಸಾಕ್ಷಾತ್ಕಾರ ಮಾಡಿಕೊಂಡ ಅವಳ ಅನುಭಾವಗಳನ್ನು ಕಾಶ್ಮೀರಿ ಭಾಷೆಯಲ್ಲಿ ಸಂಗ್ರಹವಾಗಿ, ಪರಿಷ್ಕಾರಗೊಂಡು ಪ್ರಕಟವಾಗಿವೆ. ಸಾಧನೆಗಳ ಆರಂಭದಿಂದ ಆಧ್ಯಾತ್ಮಿಕ ಚಿಂತನೆ ಗಳಲ್ಲಿ ಅಂತ್ಯದವರೆಗೆ ಸಾಗಿ ಶಿವ ಸಾಕ್ಷಾತ್ಕಾರದವರೆಗೆ ಬದುಕಿನಲ್ಲಿ ಎದುರಿಸಿದ ತೊಂದರೆಗಳು, ಅವುಗಳನ್ನು ಮೀರಿ ನಿಂತು ಸಾಧನೆ ಮಾಡಿ ಸಿದ್ಧಿ ಪಡೆದ ಆತ್ಮ ಚೈತ್ರಯಾತ್ರೆಯ ಸಮಗ್ರ ಚಿತ್ತ ಅವಳು ಏರಿದ ಎತ್ತರವನ್ನು ಚಿತ್ರಿಸುತ್ತದೆ.

ಲಲ್ಲೇಶ್ವರಿಯು ಶಿವಸಾಕ್ಷಾತ್ಕಾರಕ್ಕೆ ಹೊರಡುವ ಮುನ್ನ ಗುರುಮುಖೇನ ಸಾಧನೆಮಾಡಿ ಸಾಧನಾ ಪಥದಲ್ಲಿ ಮುನ್ನಡೆದಳು. ಹೀಗೆ ಸಾಗುವಾಗ ಹೊಗಳಿಕೆ ತೆಗಲಿಕೆಗಳನ್ನು ಸಮಾನವಾಗಿ ಸ್ವೀಕರಿಸಿದ ಅವಳ ಸಮಚಿತ್ತದ ಒಂದು ನಿದರ್ಶನ ಹೀಗಿದೆ. ಸಾಂಪ್ರದಾಯಿಕ ಉಡುಗೆ ಧರಿಸದೆ ಅರೆನಗ್ನಳಾಗಿರುತ್ತಿದ್ದುದರಿಂದ ಅವಳ ಶಿವಧ್ಯಾನ ಭಕ್ತಿಯನ್ನು ಅರಿಯದ ಜನ ಅಪಹಾಸ್ಯ ಮಾಡಿ ಅಪನಿಂದೆ ಮಾಡುತ್ತಾರೆ. ಒಮ್ಮೆ ಕೆಲವು ಮಕ್ಕಳು ಅವಳನ್ನು ಗೇಲಿ ಮಾಡುತ್ತಿದ್ದಾಗ ಅಲ್ಲಿಗೆ ಬಂದ ಬಟ್ಟೆ ವ್ಯಾಪಾರಿ ಮಕ್ಕಳಿಗೆ ಹಾಗೆ ಮಾಡಬಾರದೆಂದು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಲಲ್ಲೇಶ್ವರಿ ಆ ವ್ಯಾಪಾರಿಯಿಂದ ಸ್ವಲ್ಪ ಬಟ್ಟೆ ಪಡೆದು ಎರಡು ಭುಜಗಳ ಮೇಲೆ ಸಮಾನವಾಗಿ ತುಣುಕುಗಳನ್ನು ಮಾಡಿ ಹಾಕಿಕೊಂಡು ಹೊರಡುತ್ತಾಳೆ. ದಾರಿಯಲ್ಲಿ ತಾನು ಪಡೆದ ಮಾನ ಅವಮಾನಗಳಿಗೆ ಪ್ರತಿಸಾರಿಯೂ ಗಂಟು ಹಾಕುತ್ತಾಳೆ. ಸಂಜೆ ಅದೇ ದಾರಿಯಲ್ಲಿ ಬಂದ ಬಟ್ಟೆ ವ್ಯಾಪಾರಿಗೆ ಅದನ್ನು ಕೊಟ್ಟು ತೂಕ ಮಾಡಲು ಹೇಳಿದಾಗ, ಸಹಜವಾಗಿ ಅವೆರಡರ ತೂಕ ಒಂದೇ ಆಗಿರುತ್ತದೆ. ಇದರಿಂದ ಆಕೆ ಹೊಗಳಿಕೆ ತೆಗಳಿಕೆಗಳನ್ನು ಸಮಾನವಾಗಿ ನೋಡ ಬೇಕೆಂದು ತನ್ನ ದಾರ್ಶನಿಕ ಸಮಚಿತ್ತದ ನಿಲುವನ್ನು ತೋರಿಸಿಕೊಟ್ಟಳು. ಮಾಗಿದ ಮನಸ್ಸಿನಲ್ಲಿ ಶ್ರೀನಗರದ ಬ್ರಿಜ್ ವಿಹಾರ್ ಎಂಬಲ್ಲಿ ಲೌಕಿಕ ಪಯಣ ಮುಗಿಸಿ ಶಿವನಲ್ಲಿ ಒಂದಾಗುತ್ತಾಳೆ.

ಲಲ್ಲೇಶ್ವರಿಯ ಉಪದೇಶಾತ್ಮಕ ವಚನಗಳು ಅಸಂಖ್ಯವಾಗಿವೆ. ಭಾಸ್ಕರಾಚಾರ್ಯನೆಂಬ ಪಂಡಿತ ಕಾಶ್ಮೀರಿ ಭಾಷೆಯಿಂದ ಅರವತ್ತು ಪದ್ಯಗಳಲ್ಲಿ ಸಂಸ್ಕೃತ ಭಾಷೆಗೆ ರ್ ರೂಪಾಂತರಿಸಿದ್ದಾನೆ. ಆಂಗ್ಲ ವಿದ್ವಾಂಸರು ಹೆಚ್ಚಿನ ವಚನಗಳನ್ನು ಸಂಗ್ರಹಿಸಿ ದೀರ್ಘ ಪೀಠಿಕೆಯೊಡನೆ ಪ್ರಕಟಿಸಿದ್ದಾರೆ. ಸಂಸ್ಕೃತ ಪದ್ಯಗಳಲ್ಲಿರುವ ಆಕೆಯ ಕೆಲವು ಪದ್ಯಗಳ ಸರಳಾನುವಾದ ಹೀಗಿವೆ.

ಸಾಧನಾಪಥದ ಭಕ್ತನಿಗೆ ತಾನಾರು? ಎಲ್ಲಿಂದ ಬಂದೆ? ಎಲ್ಲಿಗೆ ಹೋಗುವೆ? ಎಂಬ ಜಿಜ್ಞಾಸೆ ಮೊದಲು ಉಂಟಾಗುವಂತೆ, ಆಕೆಗೂ ತನ್ನ ಮಾರ್ಗ ತಿಳಿಯದಾಗಿದೆ. ಆ ನಿಜ ತತ್ವವನ್ನು ತಿಳಿಯಬೇಕೆಂಬ ಬಯಕೆಯಿಂದ ಧೃತಿಗೆಡದೆ ಧೈರ್ಯ ತಂದುಕೊಳ್ಳುತ್ತಿದ್ದೇನೆ.

ದೇಹವಿಡಿದು ಹುಟ್ಟಿ ಬಂದಿರುವ ನನಗೆ ಈ ದೇಹಾಭಿಮಾನದಿಂದಾಗಿ ನಾನಾರು? ನೀನಾರು ನೀನು ನಾನು ನಾನು ನೀನು ಆಗಿದ್ದೇವೆಂಬುದು ಹೇಗೆ ಎಂಬುದು ತಿಳಿಯಲಿಲ್ಲ. ನಾನಾರು ಎಂಬುದನ್ನು ತಿಳಿದುಕೊಳ್ಳಲು ತೀರ್ಥಕ್ಷೇತ್ರಗಳಿಗೆ ಹೋದೆ, ಪರಮಾತ್ಮನ ಗುಣಗಳನ್ನು ಹಾಡಿ ಹೊಗಳಿದೆ. ಶಂಕರನನ್ನು ಹುಡುಕುತ್ತ ಬಹು ದೂರ ಬಂದೆ. ಎಲ್ಲೂ ಅವನ ದರ್ಶನ ಆಗಲಿಲ್ಲ. ಕೊನೆಗೆ ನನ್ನ ಮನಸ್ಸಿನಲ್ಲಿ ಪರಮಾತ್ಮನ ಸ್ವರೂಪ ವಿಮರ್ಶೆ ಮಾಡಿದಾಗ ನನ್ನ





ಅಂತರಾತ್ಮದಲ್ಲಿಯೇ ಇರುವೆನೆಂಬ ಅರಿವು ಉಂಟಾಗಿ ಅವನನ್ನು ಗುರುತಿಸಿದೆ. ಆತ ನಮ್ಮಲ್ಲಿಯೇ ಇದ್ದು ನಮ್ಮ ಕಣ್ಣು ತುಂಬ. ಇದ್ದಾನೆ. ಅವನ ಬರವನ್ನು ಗುರಿತಿಸಿಕೊ ಎನ್ನುತ್ತಾಳೆ, ಆತ ನಮ್ಮಂತೆಯೇ ಸ್ನಾನ ಮಾಡುತ್ತಾ ನಗುತ್ತಾ ವಿವಿಧ ಕಾರ್ಯಗಳನ್ನು ಮಾಡುತ್ತಾ ನಮ್ಮ ದೇಹದಲ್ಲಿಯೇ ಅಡಗಿದ್ದನೆ ಎಂದು ಸ್ವಾತ್ಮದ ಅರಿವನ್ನು ಪ್ರತ್ಯಕ್ಷ ಅನುಭವಿಸಿ ಹೇಳಿದ ಅನುಭಾವಿ ಲಲ್ಲೇಶ್ವರಿ.

ಪರಶಿವನನ್ನು ಸಾಕ್ಷಾತ್ಕರಿಸಿಕೊಂಡವನು ಮುಕ್ತ. ಸಾಕ್ಷಾತ್ಕರಿಸಿಕೊಳ್ಳದವನು ಬದ್ಧ ಜೀವಿ. ಬದ್ದ ಜೀವಿಯಾಗಲು ಕಾರಣ ಮನಸು, ಕೋಪಕ್ಕೆ ಪಕ್ಕಾಗುವ ಅವಮಾನಕ್ಕೆ ವ್ಯಥೆ ಪಡುವ, ಮನಸ್ಸು ಈ ಯಾವ ವಿಸ್ತಾರವೂ ಇಲ್ಲದಾಗ ಶುದ್ಧವಾದ ಜ್ಞಾನ ರೂಪವೇ ಆಗಿರುತ್ತದೆ. ಮನಸನ್ನು ಚಿತ್ತೈಕಾಗ್ರತೆಯಿಂದೆ ಯೋಗದಿಂದ ನಿಯಂತ್ರಿಸಿ ಕಲ್ಮಶಗಳನ್ನು ಕಳೆದುಕೊಂಡು ಗುರಿ ಮುಟ್ಟಿದಾಗ ಹುಟ್ಟು ಸಾರ್ಥಕ ಎಂದು ಯೋಗಾಭ್ಯಾಸದಿಂದ ಚಿತ್ತ ಸಂಯಮ ಸಾಧಿಸುತ್ತಾಳೆ.

*ಚಿತ್ತಾದರ್ಶೇ ನಿರ್ಮಲತ್ವಂ ಪ್ರಿಯತೇ । ಪ್ರೋದ್ಯುತಾ*
*ಮೇ ಸ್ವಜನೇ ಪ್ರತಿಭಿಜ್ಞಾ, ದೃಷ್ಟೋದೇವ, ಸ್ವಸ್ವರುಪೋ*
*ಮಯಾ ಸೌ। ನಾಮ ನಿತ್ಯಂ ಸೈವ ಜಾಯಂ ಪ್ರಪಂಚಃ'*

ಎಂದು ಸ್ವಜನ ಪರಜನ ಭೇದ ಕಳೆದಾಗ, ಹೊರಗಿನ ಪ್ರಪಂಚವೂ ಪರಮಾತ್ಮನೂ ಬೇರೆಯಲ್ಲವೆಂಬ ಅನುಭಾವದ ಎತ್ತರವನ್ನು ದರ್ಶಿಸಿದ್ದಾಳೆ. ಪ್ರಶಾಂತ ಧ್ಯಾನದ ಅವಸ್ಥೆಯಲ್ಲಿ ನಾನು ನೀನು ಭೇದ ಕಳೆದಾಗ, ಅಖಂಡ ಬ್ರಹ್ಮನಲ್ಲಿ ಲೀನವಾದ ಸ್ವಸ್ವರೂಪವು ತನ್ನನ್ನು ತಾನು ಮರೆಯುತ್ತದೆ. ಎಲ್ಲವೂ ಶಿವಸ್ವರೂಪ ಎಂದು ಶಿವ ಸಾಕ್ಷಾತ್ಕಾರದ ಸಿದ್ಧಿಯಲ್ಲಿ, ಶಿವನೇ ತಾನಾಗುತ್ತಾಳೆ. ಹೀಗೆ ಲೋಕ ಹಿತ ಬಯಸಿ ಶಿವನಲ್ಲಿ ಬಂದಾಗಿ ಐಕ್ಯಳಾದ ಲಲ್ಲೇಶ್ವರಿ ಇಂದಿಗೂ ಕಾಶ್ಮೀರದಲ್ಲಿ ಮನೆ ಮನೆಗಳಲ್ಲಿ ಜೀವಂತವಾಗಿದ್ದಾಳೆ. ✠

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ವಿನಂತಿ

ನಿಮ್ಮ ವಿಳಾಸ ಬದಲಾದಾಗ ವಿಳಾಸ ದಲ್ಲಿರುವ ನಂಬರ್ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಈ ನಂಬರ್ ಪ್ರತಿಗಳನ್ನು ರವಾನಿಸುವ ಕವರ್ ಮೇಲೆ ಇರುವ ನಿಮ್ಮ ವಿಳಾಸದಲ್ಲಿರುವುದು. ಈ ನಂಬರ್‌ಸ್ಥಿರ ನೆನಪಿನಲ್ಲಿಡಿ.

**ಪ್ರಕಾಶಕರು**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು– 572 104.

## ದಾಸೋಹ ನಿಧಿದಾನಿಗಳು



ಲಿಂ. ಶ್ರೀ ಸಿ.ವಿ. ತಿಪ್ಪೇಸ್ವಾಮಿ ಹಾಗೂ
ಲಿಂ. ಶ್ರೀಮತಿ ಚೆನ್ನಮ್ಮನವರು

ಇವರು ಚಳ್ಳಕೆರೆಯ ಗ್ರಂಥಿಗೆ ವ್ಯಾಪಾರಸ್ಥರಾಗಿದ್ದ ಲಿಂ. ವೀರಭದ್ರಪ್ಪ ಮತ್ತು ಲಿಂ. ಚನ್ನಬಸಮ್ಮ ಇವರ ಮಗನಾಗಿ 24-12-1924ರಲ್ಲಿ ಜನಿಸಿದರು. 1946ರಲ್ಲಿ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಪದವಿ ಪಡೆದರು. ಅದೇ ವರ್ಷ ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ ಆಗಿ ನೇಮಕಗೊಂಡರು. 1949ರಲ್ಲಿ ಶಿವಮೊಗ್ಗದ ಲಿಂ ಜೆ.ಹೆಚ್. ಹಾಲಪ್ಪ ಲಿಂ.ಬಸಮ್ಮ ಇವರ ಪುತ್ರಿ ಚೆನ್ನಮ್ಮ ಇವರೊಂದಿಗೆ ವಿವಾಹ. 1980ರಲ್ಲಿ ಕಾರ್ಯಪಾಲಕ ಅಭಿಯಂತರರಾಗಿ ಸೇವೆಯಿಂದ ನಿವೃತ್ತಿ ಪಡೆದರು ನಂತರ ಎಸ್.ಜೆ.ಎಂ. ಪಾಲಿಟೆಕ್ನಿಕ್, ಚೆಳ್ಳಕೆರೆ, ಇಲ್ಲಿ ಗೌರವ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಣೆ ಮಾಡಿದರು. 2000ನೇ ಇಸವಿಯಲ್ಲಿ ಶ್ರೀಯುತರ ಪತ್ನಿಯಾದ ಶ್ರೀಮತಿ ಚೆನ್ನಮ್ಮನವರು ಹಾಗೂ 14-02-2004 ರಂದು ಸಿ.ವಿ. ತಿಪ್ಪೇಸ್ವಾಮಿಯವರು ಲಿಂಗೈಕ್ಯರಾದರು.

ಶ್ರೀ ಸಿದ್ಧಗಂಗಾ ಮಠದ ಸದ್ಭಕ್ತರಾಗಿ, ನಿಕಟ ಸಂಪರ್ಕ ಹೊಂದಿದ್ದರು. ಶ್ರೀಮಠದ ದಾಸೋಹ ಮಣಿಹವನ್ನು ಯಾವತ್ತೂ ಸ್ಮರಿಸುತ್ತಿದ್ದರು. ಶ್ರೀ ಮಠದ ದಾಸೋಹ ದಿಗಂತ ದಿನದಿಂದ ದಿನಕ್ಕೆ ವಿಸ್ತರಿಸುವುದನ್ನು ಮನಗಂಡ ಮಾತಾಪಿತ್ರರ ಅನಿಸಿಕೆಯಂತೆ ಅವರ ಮಗಳಾದ ಮಗಳಾದ ಶ್ರೀಮತಿ ಸಿ.ಟಿ. ಶೋಭ ಇವರು ತಮ್ಮ ತಂದೆ ತಾಯಿಗಳ ಸ್ಮರಣಾರ್ಥವಾಗಿ ದಾಸೋಹ ನಿಧಿಗೆ ಒಂದು ಲಕ್ಷ ರೂಗಳನ್ನು ಸಮರ್ಪಿಸುವುದರ ಮೂಲಕ ಮಾತಾ ಪಿತರ ದಾಸೋಹ ತತ್ವಪ್ರೇಮವನ್ನು ಈಡೇರಿಸಿರುತ್ತಾರೆ. ಶ್ರೀಮಠದ ಸೇವಾ ಮಣಿಹಕ್ಕೆ ಸಕ್ರೀಯ ಸಹಕಾರವನ್ನು ನೀಡಿರುತ್ತಾರೆ. ಈ ಸಂದರ್ಭದಲ್ಲಿ 'ಸಿದ್ಧಗಂಗಾ' ಇವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನುಂಟುಮಾಡಲಿ ಎಂದು ಹಾರ್ದಿಕವಾಗಿ ವಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.



# ನಿಸರ್ಗೋಪಚಾರದಲ್ಲಿ ಜಡತತ್ವಗಳು

– ಮುಂದುವರೆದ ಭಾಗ

## ಪ್ರಾಕೃತಿಕ ಉಪಚಾರ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

**ಆ**ರೋಗ್ಯದ ಬಗ್ಗೆ ತಿಳಿದಾಯ್ತು. ರೋಗದ ಬಗ್ಗೆಯೂ ತಿಳಿದದ್ದು ಸಾಕಷ್ಟು ಆಯ್ತು. ರೋಗ ಬರದಂತೆ ಜೀವಿಪುದು ಮನುಜನ ಹೊಣೆ ಎನ್ನುವುದನ್ನೂ ಅರಿತಾಯ್ತು. ಇಷ್ಟರ ಮೇಲೆಯೂ ರೋಗ ಬಂದರೆ ಏನು ಮಾಡಬೇಕು. ಔಷಧ ಗಳನ್ನು ಬಳಸಿ ರೋಗವನ್ನು ವಾಸಿಮಾಡಿಕೊಳ್ಳಬೇಕು. ಹಿಂದೆ ನಿಸರ್ಗೋಪಚಾರದ ಬಗ್ಗೆ ಸ್ಥೂಲವಾಗಿ ಕೊಂಚ ಹೇಳಲಾಗಿದೆ. ಅದೇ ವಿಷಯವನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ವಿಶ್ಲೇಷಿಸುವ. ಈ ಶರೀರ ಪಂಚಭೂತಗಳೆಂಬ ಸ್ಥೂಲ ತತ್ವಗಳಿಂದ ಆಗಿದೆ. ಅದರ ಬಗ್ಗೆಯೂ ತಿಳಿಯುವ.

'ಔಷಧಿ ಬೇಡವೆಂದವರು ಮತ್ತೆ ಔಷಧಿ ಬಳಸಿರೆಂದು ಹೇಳುವಿರಲ್ಲ?'

'ನಿಜವಾದ ಅರ್ಥದಲ್ಲಿ ಯಾವುದು ಔಷಧಿ?'

ಔಷಧಿ ಎಂದು ನಾವಂದುಕೊಂಡಿರುವುದು ಯಾವುದೋ ಮೂಲಿಕೆ ಅಥವಾ ಯಾವುದೋ ಮಾತ್ರೆಯೋ, ಮತ್ತೆ ಇಂಜೆಕ್ಷನ್ನೋ ಯಾವುದೋ ಒಂದು. ಆದರೆ ಔಷಧಿ ಎಂಬ ಪದದ ಅರ್ಥ ಈ ರೀತಿ ಇದೆ.

"ಔಷಧಿ ಎಂಬ ಶಬ್ಧದ ಅರ್ಥವು ಬರೀ ಮೂಲಿಕೆ ಎಂದಾಗುವುದಿಲ್ಲ. ಏಕೆಂದರೆ ಔಷಧಿ ಎಂಬ ಶಬ್ಧವು, ಉಷ+ಧಿ ಎಂಬ ಶಬ್ಧಗಳ ಸಂಗಮವಾಗಿದೆ. 'ಉಷ' ಎಂದರೆ 'ತೇಜಸ್' ಎಂಬ ಅರ್ಥವಿದೆ. ಆದ್ದರಿಂದ ತೇಜೋನಿಧಿ ಯಾಗಿರುವ ಉಪಾಯಗಳೆಲ್ಲವೂ ಔಷಧಿಗಳೇ ಆಗಿವೆ". 'ಆಯುರ್ವೇದೀಯ ಪ್ರಕೃತಿ ಚಿಕಿತ್ಸೆ' –ಡಾ॥ ಎಂ. ಗೋಪಾಲ ಕೃಷ್ಣರಾಯರು.

ಶರೀರದ ಒಳಗಿರುವ ಚೈತನ್ಯವು ತೇಜೋ ತತ್ವ. ಅದಕ್ಕೆ ಅಡಚಣೆಯುಂಟಾದಾಗ ಅದನ್ನು ಪರಿಹರಿಸುವ ಎಲ್ಲಾ ಉಪಾಯಗಳೂ ಔಷಧಗಳೇ ಸರಿ. ಶರೀರದ ರಿಪೇರಿಗೆ, ಯಾವುದರಿಂದ ಆ ಶರೀರ ಮಾಡಲ್ಪಟ್ಟಿದೆಯೋ ಅದೇ ವಸ್ತುಗಳನ್ನು ಉಪಯೋಗಿಸಿದರೆ ಸುಲಭವಾಗುತ್ತದೆ.

ಹಿಂದೆ ಕೊಟ್ಟಿದ್ದ ಒಂದು ಉದಾಹರಣೆಯನ್ನು ಮುಂದುವರಿಸುವ, ಒಂದು ತಿಂಗಳು ಬೀಗ ಹಾಕಿದ್ದ ಮನೆಗೆ ಬೀಗ ತೆಗೆದು ಪ್ರವೇಶಿಸುತ್ತೇವೆ. ಒಳಗೆ ಧೂಳು, ಜೇಡ ಮುಂತಾದ ಜೀವವಿರುವ ನಿರ್ಜೀವಿಯಾದ ಎಲ್ಲಾ ರೀತಿಯ ಕಸವೂ ತುಂಬಿದೆ. ಮನೆಯು ವಾಸಕ್ಕೆ ಯೋಗ್ಯವಾಗಿಲ್ಲ. ಅದನ್ನು ಯೋಗ್ಯವಾಗಿ ಮಾಡುವುದು ಹೇಗೆ? ಅದಕ್ಕಾಗಿ ನಾವು ಮಾಡುವ ಮೊದಲ ಕೆಲಸವೇನು? ಮೊದಲು ಕಿಟಕಿ, ಬಾಗಿಲುಗಳನ್ನು ತೆಗೆಯುತ್ತೇವೆ. ನಂತರ ಕಸಪೊರಕೆಯಿಂದ ಎಲ್ಲಾ ಕಸ ಗುಡಿಸುತ್ತೇವೆ. ಅದನ್ನು ತೆಗೆದು ಹೊರಕ್ಕೆ ಹಾಕುತ್ತೇವೆ. ಆಮೇಲೆ ನೀರಿನಿಂದ ನೆನೆಸಿದ ಬಟ್ಟೆಯಿಂದ ಒರೆಸುತ್ತೇವೆ. ಈಗ ಮನೆ ಸ್ವಚ್ಛವಾಯಿತು. **ರೋಗವೆಂದರೆ ಒಳಗಿನ ಕೊಳೆಯನ್ನು ಪ್ರಕೃತಿಯೇ ಹೊರಗೆ ಹಾಕುತ್ತಿರುವ ರೀತಿಯೆಂದು ಅರ್ಥೈಸಿದೆವು.** ಮನೆಯನ್ನು ಶುಚಿಮಾಡಲು ಏನನ್ನು ಉಪಯೋಗಿಸಿದೆವು? ನೀರು, ಗಾಳಿ, ಬೆಳಕು. ಅವೇ ವಸ್ತುಗಳು ನಮ್ಮ ಶರೀರದ ಕೊಳೆಯನ್ನು ತೆಗೆದು ಶುಚಿಮಾಡಲೂ ಸಹ ಉಪಯೋಗಕ್ಕೆ ಬರುತ್ತವೆ. ಒಳಗಿನ 'ಜೀವಶಕ್ತಿ' ಕೊಳೆಯನ್ನು ತೆಗೆದುಕೊಳ್ಳಲು ಪ್ರಾರಂಭಿಸಿದೆ. ಅದಕ್ಕೆ ಕೊಂಚ ಸಹಾಯವಷ್ಟೇ ನಮ್ಮ ಕೆಲಸ. ಆ ಸಹಾಯ ವಾದರೂ ಹೇಗಿರಬೇಕು? ನಿಸರ್ಗದ ಮಾರ್ಗದಲ್ಲಿಯೇ ಇರಬೇಕು. ಶುಚಿಗೊಳಿಸಲು ಪ್ರಕೃತಿ ಸೃಷ್ಟಿಸಿರುವ ವಸ್ತುಗಳು– ಪಂಚಭೂತಗಳು. ಈ ಶರೀರವನ್ನು ಸೃಷ್ಟಿಸಲು ಪ್ರಕೃತಿ ಬಳಸಿದ ವಸ್ತುಗಳು– ಪಂಚಭೂತಗಳು. ಈ ಶರೀರಕ್ಕೆ ಆಹಾರ–ಪಂಚಭೂತಗಳು. ಈ ಶರೀರಕ್ಕೆ ಔಷಧ– ಅವೇ ಪಂಚಭೂತಗಳು.

*ನಿಸರ್ಗವೇ ನೂಕುತಿದೆ ಕೊಳೆಯನು ಹೊರಗೆ ನೀನೂ*
*ಒಂದು ಕೈ ಹಾಕು ಅದರ ಜೊತೆಗೆ*
*ಅದಕೆ ಬಳಸು ಅದೇ ಸೃಷ್ಟಿಸಿದ ಪಂಚಭೂತಗಳನು*
*ಮಿಕ್ಕ ತಾಕಲಾಟ ನಿವಾರಿಸದು ನಿನ್ನ ನೋವನು.*
*ರೋಗವದು ಶತ್ರುವೆಂದು ಬಗೆದೆ ಅದರಿಂದಾಯ್ತು*
*ನಿನ್ನ ದಾರಿ ತಿರುಗು ಮುರುಗು*
*ಇದರಿಂದ ಮುಕ್ತಿ ಬೇಕಾದಲ್ಲಿ ನಿಸರ್ಗದಾ ಮಾರ್ಗಕೇ*
*ಹಿಂದಿರುಗು. ಔಷಧಿ ಆದಾಗ ಒಂದು ತತ್ವ*
*ಅರಿವಾಗುವುದು ಅದರ ಮಹತ್ವ*
*ಔಷಧಿ ಆಯಿತು ಒಂದು ವಸ್ತು. ಹಾಗಾಗಿ ನಾವು*





*ಬಿದ್ದೆವು ಬೆಸ್ತು! ಪ್ರಕೃತಿ ಎಂದರೆ ಯಾರು?*
*ನದಿ, ಬೆಟ್ಟ ಅದರಲಿರುವ ತರು ಹಕ್ಕಿ ಪಕ್ಷಿ*
*ಕುಣಿಯುವಾ ಕರು ಬಾನು ಬೆಳಗು ಮಿನುಗುತ ತಾರೆ*
*ಸಾಗರ, ಚಿಕ್ಕದಾದರೂ ಹರಿಯುವ ತೊರೆ*
*ಪ್ರಕೃತಿ ಎಂದರೆ ಇಷ್ಟೆ ಏನು? ಇವಷ್ಟೆ ಅಲ್ಲವು*
*ಪ್ರಕೃತಿಯ ಸೂನು. ಇವುಗಳೂ ಹೌದು. ಜೊತೆಗೆ*
*ಇವುಗಳ ಹಿಂದಿರುವ ತತ್ವ. ವೇದಾಂತ ಅದಕೆ*
*ನೀಡಿಹುದು ಮಹತ್ವ. ಆಕಾಶ, ಗಾಳಿ, ಸೂರ್ಯ,*
*ನೀರು, ಭೂಮಿ. ಮನಸು, ಬುದ್ಧಿ, 'ನಾನು,' ನಾನು'*
*ಎಂಬ ಮಾತು ಸ್ವಾಮಿ*
*ಈ ಎಂಟನೂ ಪರಮಾತ್ಮ ಹೇಳಿಕೊಂಡಿಹನು ತನ್ನ*
*ಪ್ರಕೃತಿ ಎಂದು ಉಪಚಾರಕಾಗಿ ಇವಿಷ್ಟನೂ*
*ಬಳಸಿಕೊಳ್ಳಬೇಕು ಬಂಧು ಜೊತೆಗೆ ಊಟ, ನಿದ್ದೆ,*
*ವ್ಯಾಯಾಮ, ವಿಶ್ರಾಂತಿ ಇವೆಲ್ಲಾ ತರುವುವು*
*ಆರೋಗ್ಯದಲಿ ಕ್ರಾಂತಿ*
*'ಔಷಧ ತರುವುದು ಆರೋಗ್ಯ' ಎಂಬುದು ನಮ್ಮ*
*ಭ್ರಾಂತಿ ರೋಗ ದೂರವಾಗಲು ತೆಗೆದುಕೊಳ್ಳುವುದು*
*ತನ್ನದೇ ಕಾಲ ಹಿಡಿದರೆ ನಡೆಯದು ಯಾರದೂ ಬಾಲ*
*ಮೇಲಿನವುಗಳೆಲ್ಲವನೂ ಬಳಸಬೇಕು ಔಷಧಿಗಳಾಗಿ*
*ಅಹಿಂಸೆಯಿಂ ಎಲ್ಲವನು ಬಳಸು ಮಧ್ಯಮಾರ್ಗದಲಿ*
*ಪ್ರಕೃತಿಗೆ ತಲೆಬಾಗಿ*
*ಪಂಚಭೂತಗಳು ಶರೀರವೆಂಬ ಕಟ್ಟಡದ ಅಡಿಪಾಯ*
*ಅದರ ರಿಪೇರಿಗೂ ಅವುಗಳನೇ ಬಳಸುವುದು*
*ಉಪಾಯ*

*ಭೂಮಿರಾಪೋಽನಲೋವಾಯುಃ ಖಂ ಮನೋ*
*ಬುದ್ಧಿರೇವಚ ।*
*ಅಹಂಕಾರ ಇತೀಯಂ ಮೇ ಭಿನಾ ಪ್ರಕೃತಿರಷ್ಟಧಾ ॥*
(ಭಗವದ್ಗೀತೆ 7.4)

ಭೂಮಿ, ನೀರು, ಬೆಂಕಿ(ಸೂರ್ಯ), ವಾಯು, ಆಕಾಶ ಎಂಬ ಪಂಚಭೂತಗಳು, ಮನಸ್ಸು, ಬುದ್ಧಿ, ಅಹಂಕಾರ (ನಾನು ಇದ್ದೇನೆ ಎಂಬ ಅರಿವು, ದುರಹಂಕಾರವಲ್ಲ). ಈ ಎಂಟೂ ನನ್ನ ಪ್ರಕೃತಿ ಎಂದು ಪರಮಾತ್ಮನು ಹೇಳಿಕೊಂಡಿದ್ದಾನೆ.

ವಿಶ್ವಶಕ್ತಿಯ ಪ್ರಕಟಿತ ರೂಪ ಪ್ರಕೃತಿ, ಅಪ್ರಕಟಿತ ರೂಪ ಪರಮಾತ್ಮ. ಪ್ರಾಕೃತಿಕ ಉಪಚಾರದಲ್ಲಿ ಪ್ರಕೃತಿಯ ಎಂಟು ತತ್ವ ಗಳೂ ಹಾಗೂ ಪರಮಾತ್ಮನ ಸಹಾಯದಿಂದ ನಮ್ಮ ರೋಗಗಳನ್ನು ಕಳೆದುಕೊಳ್ಳಬೇಕು. ಯಾವುದಾದರೂ ಒಂದು ವಸ್ತುವನ್ನು ಬಳಸಬೇಕಾದಲ್ಲಿ ಅದರ ಗುಣ, ಧರ್ಮದ ಅರಿವಿನಿಂದ ಅದನ್ನು ಹೆಚ್ಚು ಉಪಯುಕ್ತವಾಗಿ ಬಳಸಬಹುದು.

### ಪಂಚಭೂತಗಳು

Britain, as in Germany and in certain quarters in this (U.S.A.) country, the 'Water cure' of Priessnitz is regarded as the heart of 'Nature Cure'. ' ಜಲ ಚಿಕಿತ್ಸೆಯು ನಿಸರ್ಗ ಚಿಕಿತ್ಸೆಯ ಹೃದಯವೆಂಬಂತೆ ಪ್ರೆಸ್ನೀಜ್‌ನಿಂದ ಜರ್ಮನಿಯಲ್ಲಿ ಪ್ರಾರಂಭವಾಗಿ ಇಂಗ್ಲೆಂಡ್, ಅಮೆರಿಕಾ, ಯುರೋಪ್‌ಗಳಿಗೂ ಹರಡಿತು.' Dr. Herbert Shelton. M.D., Introduction to Natural Hygine.

ಹೀಗೆ ಪಶ್ಚಿಮದಲ್ಲಿ **'ಜಲಚಿಕಿತ್ಸೆ'**ಯಿಂದ ನಿಸರ್ಗ ಚಿಕಿತ್ಸೆಯು ಪ್ರಾರಂಭವಾಯ್ತು. ರಿಕ್ಲಿಯು ಗಾಳಿ ಮತ್ತು ಬಿಸಿಲು, ಜಸ್ವನು ಮಣ್ಣು, ಹೀಗೆ ಪ್ರಕೃತಿಯಲ್ಲಿನ ವಿವಿಧ ಘಟಕಗಳನ್ನು ರೋಗಗಳ ನಿವಾರಣೆಯಲ್ಲಿ ಉಪಯೋಗಿಸುತ್ತಿದ್ದರು. ಹತ್ತೊಂಬತ್ತನೆಯ ಶತಮಾನದಿಂದಲೂ ಇವುಗಳನ್ನು ಉಪಯೊಗಿಸುತ್ತಾ ಬಂದಿದ್ದಾರೆ. ಅವುಗಳ ವೈಜ್ಞಾನಿಕ ವಿಶ್ಲೇಷಣೆ ಯಲ್ಲಿ ತೊಡಗಿದ್ದಾರೆ. ಅದು ವಸ್ತುವಿನ ಒಂದು ಮುಖ. ಭಾರತ ಇದೇ ಜ್ಞಾನವನ್ನು ಬೇರೊಂದು ಮುಖದಿಂದ ನೋಡಿತ್ತು. ಭಾರತದಲ್ಲಿ ಜ್ಞಾನದ ಮೂಲ ವೇದ. ಮುಂದೆ ಅದನ್ನು ದರ್ಶನಶಾಸ್ತ ಹಾಗೂ ಆಯುರ್ವೇದಗಳು ಬಳಸಿ ಕೊಂಡವು. ಪ್ರಕೃತಿಯಲ್ಲಿಯ ಮೂಲ ಘಟಕಗಳು, ಅವುಗಳ ಪರಸ್ಪರ ಸಂಬಂಧಗಳು ಎಲ್ಲವೂ ನಿಯಮಬದ್ಧವಾಗಿ ವಿಶ್ಲೇಷಿಸ ಲಾಗಿದೆ. ಪಾಶ್ಚಿಮಾತ್ಯರು ತಮ್ಮ ಸ್ವಂತ ಅನುಭವದಿಂದ ಇಂದು ಯಾವುದನ್ನು Neo Science of Healing ಎಂದು ಕರೆದರೋ ಅದನ್ನು ಸಾವಿರಾರು ವರ್ಷಗಳ ಹಿಂದೆಯೇ ಭಾರತೀಯ ಋಷಿಗಳು ವರ್ಣಿಸಿದ್ದರು. ಉಪನಿಷತ್ತು ಸೃಷ್ಟಿಯನ್ನು ಈ ರೀತಿ ವರ್ಣಿಸುತ್ತದೆ.

'ಪೃಥ್ವಿ' ಭೂತವನ್ನು ವೇದಿಕೆ ಮಾಡಿಕೊಂಡು, 'ಅಪ್' ಭೂತದ ಗರ್ಭದಿಂದ 'ತೇಜೋ' ಭೂತ, 'ವಾಯು' ಮತ್ತು 'ಆಕಾಶ' ಭೂತಗಳ ಕ್ರಿಯೆಗಳಿಂದ ಎಲ್ಲಾ ವಸ್ತುಗಳು ಹುಟ್ಟಿವೆ. ಯಾವ ವಸ್ತುವಿನಲ್ಲಿ ಯಾವ ಭೂತವು ಹೆಚ್ಚು ಪ್ರಮಾಣ ದಲ್ಲಿದೆಯೋ ಅದಕ್ಕೆ ಆ ಸಂಕೇತ ಕೊಡಲಾಗಿದೆ. ಮಣ್ಣು ಕಲ್ಲುಗಳಲ್ಲಿ ಪೃಥ್ವೀ ಭೂತದ ಪ್ರಮಾಣ ಹೆಚ್ಚಿರುವುದರಿಂದ ಅದನ್ನು **'ಪಾರ್ಥಿವ'** ಎಂದೂ, ನೀರಿನಲ್ಲಿ 'ಅಪ್' ಭೂತವು ವಿಶೇಷವಾಗಿರುವುದರಿಂದ ಅದನ್ನು ಆಪ್ಯ ಎಂದೂ, ಸೂರ್ಯನಲ್ಲಿ ತೇಜೋಭೂತವು ಹೆಚ್ಚಿರುವುದರಿಂದ ಅದನ್ನು 'ತೈಜಸ' ಎಂದೂ, ವಾಯು ಪ್ರಧಾನವಾದುದ್ದನ್ನು 'ವಾಯುವ್ಯ', ಆಕಾಶ ಪ್ರಧಾನವಾದುದ್ದನ್ನು 'ನಾಭಸ' ಎಂದೂ ಕರೆಯ ಲಾಗುತ್ತದೆ. ಪಂಚಮಹಾಭೂತಗಳೆನ್ನುವವು ತತ್ವಗಳೇ ವಿನಃ ವಸ್ತುಗಳಲ್ಲ. ವಸ್ತುಗಳಲ್ಲಿ ಅವುಗಳ ಆವಿರ್ಭಾವವಿದೆ. ಬರೀ ಮಣ್ಣೂ, ನೀರು, ಗಾಳಿ, ಹೀಗೆ ಕರೆದರೆ ಆಗದೇ?

ಏಕೆ ಹೀಗೆ ಅರ್ಥಮಾಡಿಕೊಳ್ಳಬೇಕೆಂದರೆ ವಸ್ತುಗಳ ಹಿಂದಿರುವ ತತ್ವಗಳು ಸೂಕ್ಷ್ಮವಾದವುಗಳು ಹಾಗೂ ವಸ್ತುಗಳ ಹುಟ್ಟಿಗೆ ಕಾರಣವಾದವುಗಳು. ವಸ್ತುಗಳಿಗಿಂತ ಅವು ಹೆಚ್ಚು ಪ್ರಧಾನವಾದವುಗಳು. ತತ್ವಗಳು ಅರ್ಥವಾದರೆ ವಸ್ತುಗಳ ಬಳಕೆ ಸುಲಭವಾಗುತ್ತದೆ. ಬರೀ ಗಾಳಿ, ಬೆಳಕು ಎಂದು ನಿರ್ದೇಶಿಸಿದರೆ ಪಂಚಮಹಾಭೂತಗಳಿಗೆ ಸೀಮಾಬಂಧನವನ್ನು ನಾವೇ ಹಾಕಿದಂತಾಗುತ್ತದೆ. ನಮ್ಮ ಹಿಂದಿನವರು ಈ ತತ್ವಗಳನ್ನು ದೇವತ್ವಕ್ಕೇರಿಸಿದರು. ಪೃಥ್ವಿ – ಭೂಮಾತೆಯಾದಳು, ನೀರು–ವರುಣನಾದ, ಹೀಗೆ ಭಾವನೆಯನ್ನು ಎತ್ತರಕ್ಕೆ ಏರಿಸಲು ಪ್ರಯತ್ನ ನಡೆಯಿತು. ಈಚೆಗೆ ವಿಜ್ಞಾನ ಎಂಬ ಹೆಸರಿನಲ್ಲಿ ಕೆಳಕ್ಕೆ ಇಳಿಸಲಾಯ್ತು. ಇಲ್ಲಿ ಏರಿಸುವುದು –ಇಳಿಸುವುದು ಮುಖ್ಯ, ಭಾವನೆಯನ್ನು ಸಂಸ್ಕರಣಕ್ಕೆ ಒಳಪಡಿಸಿದರೆ ಕೆಲಸ ಉತ್ತಮವಾಗುತ್ತದೆ. ಇದೇ ಉದ್ದೇಶದಿಂದ ಪ್ರತಿ ಮರವನ್ನೂ ದೇವರೆಂದರು, ಪ್ರತಿ ನದಿಯೂ ದೇವಿಯಾದಳು, ಅವುಗಳ ಬಗ್ಗೆ ಪೂಜ್ಯ ಭಾವನೆ, ಪ್ರೀತಿ ಎಲ್ಲಾ ಬೆಳೆಯಿತು. ಆ ಚಿಂತನೆ ಕಡಿಮೆಯಾದಂತೆ ಪ್ರಕೃತಿಯ ಬಗ್ಗೆ ಬರೀ ವ್ಯಾವಹಾರಿಕತೆ ಬೆಳೆದು ಬರೀ ವ್ಯಾಪಾರದ ದೃಷ್ಟಿಕೋನ ಬೆಳೆಯಿತು, ಅದರ ಫಲವೇ ಇಂದು ಪ್ರಕೃತಿಯನ್ನು ನಾಶಮಾಡಲು ಪ್ರೇರಣೆ. ಮರದ ಪೂಜೆ ಮೂಢತ್ವವಲ್ಲ. ಅರ್ಥಹೀನ ಪೂಜೆ ಮೂಢತ್ವ. ಹಿಂದಿರುವ ತತ್ವವನ್ನು ಅರ್ಥ ಮಾಡಿಕೊಂಡು ಪೂಜಿಸಿದ್ದರೆ ಇಂದಿನ ಅವಹೇಳನಕ್ಕೆ ಸಿಕ್ಕುತ್ತಿರಲಿಲ್ಲ. ಪೂಜೆ ಎಂದರೆ ಬರೀ ಹೊರ ಆಡಂಬರವಾಗಿ, ಮುಖ್ಯವಾಗಿ ಅದರ ಹಿಂದಿರುವ ತತ್ವ ಮರೆಯಾದುದರಿಂದ ಪೂಜೆಯ ಫಲವೂ ದೊರೆಯಲಿಲ್ಲ. ಪಂಭೂತಗಳಿಗೂ ಅನ್ಯಾಯ ಮಾಡಿದೆವು. ಯಾವ ಗಂಗೆ, ಭಾರತಮಾತೆಯಾಗಿದ್ದಳೋ ಅವಳು ಇಂದು ಕಲ್ಮಶಗಳ ಕೂಪವಾಗಿದ್ದಾಳೆ. ನಮ್ಮ ಕೊಳೆಯನ್ನು ತೊಳೆಯುತ್ತಿದ್ದ ಗಂಗೆಯೇ ಇಂದು ಕೊಳೆಯಾಗಿದ್ದಾಳೆ. ಕಾರಣ, ಪೂಜ್ಯಭಾವನೆ ಮಾಯವಾದ್ದರಿಂದ. ಅದು ಮಾಯವಾಗಲು ಕಾರಣ, ತತ್ವವನ್ನೇ ಮರೆತದ್ದು. ತತ್ವ ಮರೆಯಲು ಕಾರಣ, ಅದು ಅರ್ಥವಾಗದಿದ್ದುದರಿಂದ! ಒಂದು ಸಣ್ಣ ಉದಾಹರಣೆ, ನಾವು ತತ್ವಶಃ ಸಸ್ಯಾಹಾರಿಗಳಾಗಿರುವುದಕ್ಕೂ, ರೂಢಿಯಿಂದ ಸಸ್ಯಾಹಾರಿಗಳಾಗಿರುವುದಕ್ಕೂ ವ್ಯತ್ಯಾಸವಿದೆ. ಮಾಂಸಾಹಾರ ಮನುಷ್ಯನ ಆಹಾರವಲ್ಲ. ಅದಕ್ಕಿಂತ ಹೆಚ್ಚಾಗಿ ಅದು ಹಿಂಸೆಯಿಂದ ಕೂಡಿದುದು ಎಂಬ ತತ್ವಕ್ಕೆ ಬದ್ಧನಾಗಿ ಸಸ್ಯಾಹಾರಿಯಾದವನು ಯಾವ ಸಂದರ್ಭದಲ್ಲೂ ಮಾಂಸಾಹಾರಿಯಾಗುವುದಿಲ್ಲ. ನಮ್ಮ ಹಿಂದಿನವರು ಸಸ್ಯಾಹಾರಿಗಳಿದ್ದರೆಂಬ ಒಂದೇ ಕಾರಣಕ್ಕೆ ಸಸ್ಯಾಹಾರಿಯಾಗಿದ್ದವನು ಕೊಂಚ ಆಮಿಷದಿಂದ ಅದನ್ನು ಬಿಟ್ಟುಬಿಡುತ್ತಾನೆ. ಆದ್ದರಿಂದ ವಸ್ತುಗಳು ಹಾಗು ಕ್ರಿಯೆಗಳು ತತ್ವಾಧಾರಿತವಾಗಿದ್ದರೆ ದೃಢವಾಗಿರಬಲ್ಲವು. ತತ್ವಶಃ ಗಾಂಧೀವಾದಿಗಳಾಗಿರುವುದಕ್ಕೂ, ಬರಿ ಗಾಂಧೀಟೋಪಿಯಿಂದ ಗಾಂಧೀವಾದಿ ಯಾಗಿರುವುದಕ್ಕೂ ವ್ಯತ್ಯಾಸವಿಲ್ಲವೇ?

ತತ್ವಗಳನ್ನು ಅರ್ಥಮಾಡಿಕೊಂಡು ನಾವು ನಿಸರ್ಗ ಜೀವನವನ್ನು ಅನುಸರಿಸುವುದರಿಂದ ನಿಸರ್ಗ ಚಿಕಿತ್ಸೆ ಸುಲಭವೂ ಹೆಚ್ಚು ಪ್ರಯೋಜನಕರವೂ ಆಗುತ್ತದೆ. ದರ್ಶನ ಶಾಸ್ತ್ರದಿಂದ ಪಂಚಮಹಾಭೂತಗಳ ತತ್ವವಾನ್ನು ತೆಗೆದುಕೊಂಡು ಆಯುರ್ವೇದವೂ ಹೆಚ್ಚು ಅರ್ಥಪೂರ್ಣವಾಗಿದೆ. ಆಯುರ್ವೇದದ ಸೋದರನದ ನಿಸರ್ಗೋಪಚಾರವೂ ಸಹ ಹಾಗೆಯೇ ನಡೆದರೆ ಪಾಶ್ಚಿಮಾತ್ಯ ನಿಸರ್ಗ ಚಿಕಿತ್ಸೆಗಿಂತ ಹೆಚ್ಚು ಅರ್ಥಪೂರ್ಣವೂ, ನೈಸರ್ಗಿಕವೂ, ಉಪಯುಕ್ತವೂ ಆಗುತ್ತದೆ.

ಯಾವುದೊಂದು ವಸ್ತುವು ಅಸ್ತಿತ್ವಕ್ಕೆ ಬರಬೇಕಾದರೆ ಅದು ಐದು ತತ್ವಗಳನ್ನು ಪಾಲಿಸಬೇಕಾಗುತ್ತದೆ. ಮೊದಲನೆಯದಗಿ ನಿಲ್ಲಲು ಒಂದು ಜಾಗ. ಎರಡನೆಯದಾಗಿ ಅಸ್ತಿತ್ವಕ್ಕೆ ಬರಬೇಕಾಗಿರುವ ವಸ್ತುವಿನ ಅವ್ಯವಸ್ಥಿತ ಘಟಕಗಳನ್ನು ಒಂದು ಗೂಡಿಸಬೇಕಾಗುತ್ತದೆ. ಮೂರನೆಯದು ಅದು ಒಂದು ವಿಶಿಷ್ಟ ರೂಪವನ್ನು ತಾಳಬೇಕು. ಹಾಗೆ ತಾಳಿದ ರೂಪವು ಬೆಳೆಯಬೇಕಾಗುತ್ತದೆ. ಕಡೆಯದಾಗಿ ಆ ವಸ್ತು ಅದಕ್ಕೆ ನಿಗದಿತವಾದಷ್ಟು ಕಾಲ ಬಾಳಬೇಕಾಗುತ್ತದೆ. ಇದನ್ನೇ ಭಾರತೀಯ ದರ್ಶನ ಶಾಸ್ತ್ರ ಹಾಗೂ ಆಯುರ್ವೇದ ಕೆಳಗಿನ ರೀತಿ ವಿವರಿಸುತ್ತದೆ.

'ಆಕಾಶೋ ಅವಕಾಶಾತ್' – ಸೃಷ್ಟಿಸಲ್ಪಟ್ಟ ವಸ್ತುವಿಗೆ ಜಾಗವನ್ನು ಆಕಾಶ ಮಹಾಭೂತವು ಒದಗಿಸುತ್ತದೆ.

'ಅಪ್ ಸಂಗ್ರಹಾತ್'– ಚದುರಿಸಲ್ಪಟ್ಟ ವಸ್ತುವಿನ ಕಣಗಳನ್ನು ಒಂದು ಗೂಡಿಸಬೇಕಾಗುತ್ತದೆ. ನೀರಿನ ಗುಣವೇ ಸೇರಿಸುವುದು.

'ತೇಜಃ ಪಾಕಾತ್' – ಬೆಂಕಿ ಅಡಿಗೆ ಮಾಡುತ್ತದೆ. ಸೇರಿಸಲ್ಪಟ್ಟ ವಸ್ತುವಿಗೆ ವಿಶಿಷ್ಟ ರೂಪ ಕೊಡುತ್ತದೆ.

'ವಾಯುರ್ವರ್ಧನಾತ್'– ಗಾಳಿಯು ಬೆಳೆಸುತ್ತದೆ.

'ಪೃಥವೀ ಧಾರಣಾತ್ – ಭೂಮಿಯು ಧರಿಸುತ್ತದೆ. ಅಂದರೆ, ಬಾಳುವಂತೆ ಮಾಡುತ್ತದೆ.

ಪಂಚಮಹಾಭೂತಗಳಿಂದ ಪಂಚಭೂತಗಳಾಗಿವೆ. ಇವುಗಳ ಪಂಚೀಕರಣದಿಂದ ಪ್ರಪಂಚದ ಎಲ್ಲಾ ವಸ್ತುಗಳೂ ಸೃಷ್ಟಿಯಾಗಿವೆ. ಅದರಲ್ಲಿ ಮಾನವಶರೀರ ಹಾಗೂ ಅವನ ಮನಸ್ಸು ಕೂಡ ಸೇರುತ್ತವೆ.

ಶರೀರವು, ಜೀವಕೋಶಗಳಿಂದ ಆದದ್ದು ಎನ್ನುತ್ತದಲ್ಲ ವಿಜ್ಞಾನ, ಇದು ಸುಳ್ಳೇ? ಶರೀರವು ಜೀವಕೋಶಗಳಿಂದ ಆಗಿದೆ ಎಂಬುದನ್ನು ಸುಳ್ಳೆಂದವರಾರು? ಆ ಜೀವಕೋಶಗಳಿರಲು ಜಾಗ ಬೇಕಲ್ಲವೇ? ಆ ಜಾಗವೇ ಆಕಾಶ. ಜೀವಂತವಾಗಿರುವ ಜೀವಕೋಶ ಉಸಿರಾಡುತ್ತದೆ. ಅದಕ್ಕೆ ಆಮ್ಲಜನಕ ಬೇಕಲ್ಲವೇ?





ಅದಕ್ಕೆ ವಾಯು ಬೇಕು. ಅದಕ್ಕೆ ಆಹಾರ ಬೇಕಲ್ಲವೇ? ಅದನ್ನು ಭೂಮಿ ಪೂರೈಸುತ್ತದೆ. ಅದು ಶಾಕವಾಗಿರಬೇಕಲ್ಲವೇ? ಅದನ್ನು ಸೂರ್ಯ ತತ್ವವು ಪೂರ್ಣಗೊಳಿಸುತ್ತದೆ. ಶರೀರದ 3/4 ಭಾಗ ನೀರು. ಜೀವಕಣಗಳು ನೀರಿನಲ್ಲಿ ತೇಲುತ್ತಿರುತ್ತವೆ. ಇದಕ್ಕೆ ನೀರು ಬೇಕಲ್ಲವೇ? ಒಂದು ಮನೆ ಕಟ್ಟಲು ಇಟ್ಟಿಗೆ, ಸಿಮೆಂಟು, ಮಣ್ಣು, ಮರಳು, ಜಲ್ಲಿ, ನೀರು ಹೀಗೆ ಬೇರೆ ಬೇರೆ ಘಟಕಗಳು ಬೇಕಾಗುವಂತೆ, ಈ ಶರೀರವೆಂಬ ಕಟ್ಟಡ ಕಟ್ಟಲು ಈ ಪಂಚಭೂತಗಳೆಂಬ ಐದನ್ನು ನಿಸರ್ಗ ಬಳಸಿಕೊಂಡಿದೆ. ನಮ್ಮ ಆಹಾರವಾಗಿ, ಶರೀರದ ರಿಪೇರಿಗಾಗಿ, ಔಷಧಿಗಳಾಗಿ ಇವನ್ನೇ ಬಳಸಿಕೊಳ್ಳಬೇಕು. ನಾವು ಔಷಧಿಗಳೆಂದು ಬಳಸುವುದು ಇವೇ ಪಂಚಭೂತಗಳಿಂದಾದ ವಸ್ತುವಿನ ವಿವಿಧ ಸಂಯೋಜನಗಳೇ ಆಗಿವೆ. ಇವೆಲ್ಲಾ ನಮ್ಮ ಬುದ್ಧಿಯಿಂದ ತಯಾರಿಸಿದ ವಸ್ತುಗಳು. ಇವುಗಳಿಗಿಂತ ಸೃಷ್ಟಿಯ ಮೂಲವಸ್ತುಗಳನ್ನೇ ಬಳಸುವುದು ಉತ್ತಮ. ಪಂಚಭೂತಗಳು ಹೆಚ್ಚು ಅಥವಾ ಕಡಿಮೆಯಾಗುವ ಅಪಾಯವಲ್ಲವೇ? ಇದೆ. ಪಂಚಭೂತಗಳ ವ್ಯತ್ಯಾಸವೇ ರೋಗ. ಅದರ ಸಮತೋಲನವೇ ಆರೋಗ್ಯ. ಜಲತತ್ವ ಶರೀರದಲ್ಲಿ ಹೆಚ್ಚಿದರೆ ನೆಗಡಿ, ಪೃಥ್ವೀತತ್ವ ಹೆಚ್ಚಿದರೆ ಬೊಜ್ಜು, ವಾಯುತತ್ವ ಹೆಚ್ಚಳದಿಂದ ಗ್ಯಾಸ್ಟ್ರಿಕ್, ರೊಮ್ಯಾಟಿಸಮ್ ಇತ್ಯಾದಿ. ಅಲ್ಲದೇ ನೀರು ಒಳ್ಳೆಯದೆಂದು ನದಿಯಲ್ಲಿ ಮುಳುಗಿದರೆ, ಬಿಸಿಲು ಒಳ್ಳೆಯದೆಂದು ಬೇಸಿಗೆಯಾಲ್ಲಿ ಪ್ರಖರವಾದ ಬಿಸಿಲಿಗೆ ಮೈ ಒಡ್ಡಿದರೆ ಸಾವು ನಿಶ್ಚಿತ. ಇವೆಲ್ಲಕ್ಕೂ ಸಾಮಾನ್ಯ ಜ್ಞಾನ ಸಾಕು. ಅಲ್ಲದೇ ನೈಸರ್ಗಿಕ ಆರೋಗ್ಯ ವಿಜ್ಞಾನದ ಪರಿಚಯ ಬೇಕು. ಆಧುನಿಕ ವೈದ್ಯ ವಿಜ್ಞಾನದ ಕ್ಲಿಷ್ಟಕರ ಪದಪುಂಜಗಳ ಅವಶ್ಯಕತೆಯಿಲ್ಲ. ಅಂದರೆ ಆ ಜ್ಞಾನ ಬೇಡವೆಂದಲ್ಲ. ಸಾಮಾನ್ಯವಾಗಿ ಆರೋಗ್ಯವಾಗಿರಲು ಅವುಗಳು ಇಲ್ಲದೆಯೂ ನಡೆದೀತು ಎಂದರ್ಥ. ಅಂತಃಪ್ರಜ್ಞೆಯೇ ಇಲ್ಲಿ ನಮಗೆ ದಾರಿದೀಪ. ನಿಸರ್ಗೋಪಚಾರದಲ್ಲಿ ಬೇರೆಯ ವೈದ್ಯರ ಅವಶ್ಯಕತೆ, ಅವಲಂಬನೆ ಸದಾ ಬೇಕಿಲ್ಲ. ಪ್ರಾರಂಭದಲ್ಲಿ ಈ ವಿಷಯದಲ್ಲಿ ಅನುಭವಿಯಾದ ಮಿತ್ರರ ಅಥವಾ ನಿಸರ್ಗ ಚಿಕಿತ್ಸಾಲಯ ಇವುಗಳ ಸಹಾಯ ತೆಗೆದುಕೊಳ್ಳುವುದು ಸರಿ. ಆದರೆ, ಮುಂದೆ ಅವರವರ ಅಂತಃಪ್ರಜ್ಞೆಯೇ ಮಾರ್ಗದರ್ಶಿಯಾಗಬೇಕು. ನಿಸರ್ಗ ಚಿಕಿತ್ಸೆ ಎಂದು ಪ್ರಾರಂಭವಾದದ್ದು ನಿಸರ್ಗ ಜೀವನವಾಗಿ ಪರಿವರ್ತನೆ ಹೊಂದಬೇಕು. ಮನೆಯೇ ವೈದ್ಯಾಲಯ. ಪರಮಾತ್ಮನೇ ವೈದ್ಯ ಪಂಚಭೂತಗಳೇ ಔಷಧಗಳು. ಪತಿ ರೋಗಿಯಾದಲ್ಲಿ ಪತ್ನಿ, ಪತ್ನಿ ರೋಗಿಯಾದಲ್ಲಿ ಪತಿ ಹೀಗೆ ಪರಸ್ಪರರೇ ದಾದಿಯರು. – ಹೀಗೆ ನಡೆಯಬೇಕು ನಿಸರ್ಗೋಪಚಾರ.

'ನಿಸರ್ಗೋಪಚಾರವನ್ನು ಕಲಿಯಲು ಪಾಶ್ಚಾತ್ಯ ದೇಶಗಳಿಗೆ ಹೋಗುವುದು ಭಾರತಕ್ಕೆ ಪ್ರಯೋಜನಕಾರಿಯಲ್ಲ. ಪ್ರತಿಯೊಬ್ಬರೂ ಮನೆಯಲ್ಲಿಯೇ ಅನುಸರಿಸುವಂತಹ ಚಿಕಿತ್ಸಾ ವಿಧಾನ ನಿಸರ್ಗ ಚಿಕಿತ್ಸೆ. ನಿಸರ್ಗ ಚಿಕಿತ್ಸಕರ ಸಲಹೆ ಸದಾ ಎಲ್ಲಾ ಕಾಲಕ್ಕೂ ಇರುವಂತಾಗಬಾರದು. ಏಕೆಂದರೆ ಅತ್ಯಂತ ಸುಲಭವಾಗಿ ಎಲ್ಲರೂ ಕಲಿಯುವಂತಹ ಪಾಠವದು'– ಹರಿಜನ, ೨.೬.೪೬. ಮೋ.ಕ.ಗಾಂಧಿ.

ಹಿಂದೆ ತಿಳಿಸಿದಂತೆ ಪರಾವಲಂಬನೆ ಸರಿಯಲ್ಲ. ಪುಸ್ತಕವೂ ಸಹ ಹೊರಗಿನ ಅವಲಂಬನೆಯೇ! ಪಂಚಭೂತಗಳು + ಪರಮಾತ್ಮ (ಅಂತಃಪ್ರಜ್ಞೆಯ ರೂಪದಲ್ಲಿ) ಇವಿಷ್ಟೇ ಸಾಕು.

ಪ್ರಶ್ನೆ: ಔಷಧಗಳೂ ಸಹ ಪಂಚಭೂತಾತ್ಮಕವಾಗಿರುವಾಗ ಮೂಲ ಪಂಚಭೂತಗಳನ್ನೇ ಉಪಯೋಗಿಸಬೇಕೆಂಬ ಹಟವೇಕೆ?

ಆಯುರ್ವೇದವೇ ಈ ಪ್ರಶ್ನೆಗೆ ಈ ರೀತಿ ಉತ್ತರಿಸಿದೆ.

*ದ್ರವ್ಯಮೇನ ರಸಾದೀನಾಂ ಶ್ರೇಷ್ಟಂ ತೇ ಹಿತದಾತ್ರಯಃ ।*
*ಪಂಚಭೂತಾತ್ಮಕಂ ತತ್ತು ತ್ವಾಮಧಿಷ್ಟಾಯ ಜಾಯತೇ ॥*

–ಅಷ್ಟಾಂಗ ಹೃದಯ

ರಸಗಳಿಗಿಂತ ದ್ರವ್ಯಗಳು ಶ್ರೇಷ್ಠ. ಏಕೆಂದರೆ ರಸಗಳು ದ್ರವ್ಯಾಧೀನ. ದ್ರವ್ಯವೆಂದರೆ ಮೂಲವಸ್ತುಗಳು–ಪಂಚಭೂತಗಳು. ರಸಗಳೆಂದರೆ ಔಷಧಿ ಮುಂತಾದವುಗಳು. ರಸಗಳು ಪಂಚಭೂತಗಳ ಸೇರುವಿಕೆಯಿಂದ ಆಗಿರುವುವು. ಪಂಚಭೂತಗಳ ತಿಳಿವಳಿಕೆ ಹಾಗೂ ಅವುಗಳ ಸದುಪಯೋಗ ಮತ್ತು ಅವುಗಳ ರಕ್ಷಣೆ ಮನುಜನ ಮೊದಲ ಕರ್ತವ್ಯ. ನಾವು ತಯಾರಿಸಿದ ಔಷಧಿಗಳಿಗೆ ಎರಡನೆಯ ಸ್ಥಾನ. ಪಂಚಭೂತಗಳ ಬಳಕೆಗೆ ಅವುಗಳ ಗುಣಗಳ ಜ್ಞಾನ ಅವಶ್ಯಕ. ಒಂದೊಂದಾಗಿ ವಿಶ್ಲೇಷಿಸುವ.

ಪ್ರಶ್ನೆ: ಪಂಚಭೂತಗಳನ್ನು ಈಗ ನಾವು ಬಳಸುತ್ತಿಲ್ಲವೇ?
ಬಳಸುತ್ತಿದ್ದೇವೆ. ಆದರೆ, ಅದರ ಅಗಾಧವಾದ ಶಕ್ತಿಯನ್ನು ತಿಳಿದಿಲ್ಲ. ಬಳಸಲೇಬೇಕಾದ ಅವಶ್ಯಕತೆಯಿಂದ ಬಳಸುತ್ತಿದ್ದೇವೆ, ಯಾವ ರೀತಿ ಬಳಸಿದರೆ ಅದು ನಮಗೆ ಆಹಾರವಾಗುತ್ತದೆ. ಅಥವಾ ಯಾವಾಗ ಅದು ನಮಗೆ ಔಷಧವಾಗುತ್ತದೆ. ಆರೋಗ್ಯದಲ್ಲಿ ಹೇಗೆ, ಅನಾರೋಗ್ಯದಲ್ಲಿ ಯಾವ ರೀತಿ ಬಳಸಬಹುದು ಇತ್ಯಾದಿ ತಿಳಿವಳಿಕೆಯಿಂದ ಬಳಸುತ್ತೀದ್ದೇವೆಂದು ಹೇಳಲಾಗುವುದಿಲ್ಲ. ಒಂದು ವೇಳೆ ಹಾಗೆ ಬಳಸುವವರಿಗೆ ನೆನಪು ಕೊಡುವುದು, ಬಳಸದವರನ್ನು ಬಳಸುವಂತೆ ಮಾಡುವುದು ಈ ಲೇಖನದ (ಪುಸ್ತಕದ) ಉದ್ದೇಶ.

*ಭೂಮಿ, ನೀರು, ಸೂರ್ಯ, ಗಾಳಿ, ಮತ್ತು ಆಕಾಶ*
*ಆರೊಗ್ಯ ಪಡೆಯಲು ಅವಕಾಶ ರೋಗನಿವಾರಣೆಗೂ*
*ಇಷ್ಟೇ ಸಾಕೆಂಬುದೇ ನಿಜ ಆದೇಶ.*

ಮನೆಯೇ ವೈದ್ಯಾಲಯ ಪರಮಾತ್ಮನೇ ವೈದ್ಯ
ಪಂಚಭೂತಳೇ ಔಷಧಗಳು

–ಮುಂದುವರೆಯುತ್ತದೆ

## ಶರನ್ನವರಾತ್ರಿ ಕಾರ್ಯಕ್ರಮಗಳು

## ಶಿಕ್ಷಕರ ಸಮ್ಮೇಳನ



**ಶ**ರನ್ನವ ರಾತ್ರಿಯ ಶುಭ ಸಂದರ್ಭದಲ್ಲಿ ಶಾರದಾ ಪೂಜೆಯನ್ನು ಏರ್ಪಡಿಸಿ, ನಮ್ಮ ಸಂಸ್ಥೆಯ ಬೋಧಕ-ಬೋಧಕೇತರ ಎಲ್ಲಾ ಸಿಬ್ಬಂದಿವರ್ಗದವರಿಗೆ ಪುನಃಶ್ಚೇತನ ಶಿಬಿರವನ್ನು ಏರ್ಪಡಿಸಲಾಗಿತ್ತು. ಅಂದು ನಾಲ್ವರು ಸಂಪನ್ಮೂಲ ವ್ಯಕ್ತಿಗಳು ಒಂದೊಂದು ವಿಚಾರದ ಬಗ್ಗೆ ಅಮೂಲ್ಯವಾದ ಜ್ಞಾನವನ್ನು ಬೋಧಿಸಿದರು.

ಶ್ರೀ ಎ.ಬಿ. ಸೀತಾರಾಂರವರು ಒತ್ತಡ ನಿರ್ವಹಣೆ ಮತ್ತು ಆಧ್ಯಾತ್ಮಿಕ ಯೋಗದ ವಿಚಾರವಾಗಿ ಮಾತನಾಡಿದರು. ಗಾಯತ್ರಿ ಮಂತ್ರ ನಮಗೆ ನಮಗಿಂತ ಮಿಗಿಲಾದ ಶಕ್ತಿ ಒಂದಿದೆ. ಅದರಲ್ಲಿ ನಂಬಿಕೆ ಇಡಬೇಕು. ನಂಬಿಕೆಯೇ ದೇವರು ಆಧ್ಯಾತ್ಮ ಬೇರೆ ಅಲ್ಲ. ಮನಶ್ಶಾಸ್ತ್ರ ಬೇರೆ ಅಲ್ಲ. ಯೋಗದ ಮೊದಲ ಸೂತ್ರ **'ಚಿತ್ತವೃತ್ತಿ ನಿರೋಧಃ ಯೋಗಃ'** ಅಂದರೆ ಮನಸ್ಸಿನ ವ್ಯಾಪಾರವನ್ನು ಒಂದು ಕಡೆ ಕೇಂದ್ರೀಕರಿಸುವುದೇ ಯೋಗ ಇದನ್ನು ನಾವು ಮತ್ತು ಮಕ್ಕಳು ಅಳವಡಿಸಿಕೊಂಡರೆ ಜಗತ್ತಿನಲ್ಲಿ ಏನನ್ನೂ ಬೇಕಾದರೂ ಸಾಧಿಸಬಹುದು. ಜೀವನ ಎಂದ ಮೇಲೆ ಸುಖ-ದುಃಖ, ನೋವು-ನಲಿವು, ಮಾನಾಪಮಾನಗಳು ಇದ್ದೇ ಇರುತ್ತವೆ. ಇವೆಲ್ಲವನ್ನೂ ಸಮನಾಗಿ ಕಾಣಬೇಕು. ಡಿ.ವಿ.ಜಿ. ಯವರು ಹೇಳುವಂತೆ 'ದುಗುಡವಾತ್ಮವ ಕಡೆದು ಸತ್ವ ವೆತ್ತುವ ಮಾತು' ಕಷ್ಟಗಳು ಇರುವುದರಿಂದಲೆ ಸುಖಕ್ಕೆ ಅರ್ಥ ಇರುವುದು. ಗೀತೆಯಲ್ಲಿ ಕೃಷ್ಣ 'ಯೋಗಃ ಕರ್ಮಸು ಕೌಶಲಃ' ಎನ್ನುತ್ತಾನೆ. ನೀನು ಶ್ರದ್ಧೆಯಿಂದ ಮಾಡುವ ಕರ್ಮವೇ ಯೋಗ. ಶಿಕ್ಷಕರಾದವರು ಇದನ್ನು ಅರಿತು ಬೋಧಿಸಬೇಕು. ವಿದ್ಯಾರ್ಥಿಯನ್ನು ನೀನು ಏನಾಗಬೇಕೆಂದು ಬಯಸಿದ್ದೀಯಾ? ಎಂದು ಪ್ರಶ್ನಿಸಿದರೆ ನಾನು ನಮ್ಮ ಗುರುಗಳಂತೆ ಆಗಬೇಕು ಎನ್ನುವ ಹಾಗೆ ನೀವು ಮಕ್ಕಳ ಮೇಲೆ ಪರಿಣಾಮ ಬೀರಬೇಕು. ಮಾನಸಿಕ ಬದ್ಧತೆ ಬಹಳ ಮುಖ್ಯ. ಸೋಲನ್ನು ಸಕಾರಾತ್ಮಕವಾಗಿ ಚಿಂತಿಸಬೇಕು. ಸೋಲೇ ಗೆಲುವಿನ ಸೋಪಾನ ಎಂದರಿಯಬೇಕು. ಜೇಡ ನಮಗೆ ಮಾದರಿಯಾಗುತ್ತದೆ. ಸತ್ಸಂಗದಿಂದ ಮಾನಸಿಕ ಒತ್ತಡ ನಿವಾರಿಸಿಕೊಳ್ಳಬಹುದು. ನಾನು ಏನು? ಎಂಬುದನ್ನು ಚಿಂತಿಸುತ್ತಾ ಹೋದರೆ, ಈರುಳ್ಳಿ ಪದರವನ್ನು ಬಿಚ್ಚುತ್ತಾ ಹೋದಂತೆ ಕೊನೆಗೆ ಉಳಿಯುವುದು ಶೂನ್ಯ. ಸಮಾಧಿಸ್ಥಿತಿ, ಇದನ್ನೇ ತುರೀಯಾವಸ್ಥೆ ಎನ್ನುತ್ತೇವೆ.

ಹುಟ್ಟುವಿಕೆಯನ್ನು ನಾವು ಒಪ್ಪಿಕೊಂಡಿದ್ದೇವೆ. ಸಾವಿಗೆ ಕಾರಣ ಹುಟ್ಟು, ನಾವು ಸಾವನ್ನು ಒಪ್ಪಿಕೊಳ್ಳಬೇಕು. ಇದರಿಂದ ಭೂತ-ಭವಿಷ್ಯತ್ತು ಚಿಂತನೆ ಇರುವುದಿಲ್ಲ. ವಿಧಿ ಏನೇ ಇದ್ದರೂ ನಮ್ಮ ಪ್ರಯತ್ನ ಬಹಳ ಮುಖ್ಯ. **'ಕರ್ಮಣ್ಯೇವಾ ಧಿಕಾರಸ್ತೆ ಮಾಫಲೇಶು ಕದಾಚನ'** ಎನ್ನುವ ಉಕ್ತಿಯ ಅರ್ಥವನ್ನು ಅರಿಯಬೇಕು. ನಮ್ಮ ಜೀವನ ಊರ್ಧ್ವಗಾಮಿಯಾಗಬೇಕು. ನಾವೆಲ್ಲಾ ಅರ್ಜುನನ ಪಾತ್ರದಲ್ಲಿದ್ದೇವೆ. ನಿಷ್ಕಾಮ ಕರ್ಮ ಅಗತ್ಯ. ಇದರಿಂದ ವೈರಾಗ್ಯಭಾವ ಮೂಡುತ್ತದೆ. ವೈರಾಗ್ಯದಿಂದ ಆನಂದವನ್ನು ಹೊಂದುತ್ತೇವೆ. ನಾವು ದೋಣಿಯಲ್ಲಿ ಕುಳಿತು ಪ್ರಯಾಣಿಸಬೇಕೆ ಹೊರತು, ನೀರು ದೋಣಿಯಲ್ಲಿ ತುಂಬಿದರೆ ಮುಳುಗುತ್ತದೆ. ನಮ್ಮ ಬದುಕು ಹಾಗೆಯೇ ಈ ಶರೀರ ಪಂಚಭೂತಗಳಿಂದ ಸೃಷ್ಟಿ ಯಾಗಿದೆ, ಶಿವಮಯವಾಗಬೇಕು, ಶವಮಯವಾಗಬಾರದು, ಶಿಕ್ಷಕರು ಮೊದಲು ಈ ವಿಚಾರಗಳನ್ನು ಅರಿತು ವಿದ್ಯಾರ್ಥಿ ಗಳಲ್ಲಿ ಇದು ಬೆಳಗಿ ತೊಳಗುವಂತೆ ಮಾಡಬೇಕೆಂದು ಆಶಿಸಿದರು.

ಶ್ರೀ ಮುಡಂಬಡತಾಯ್‌ರವರು ಬದಲಾಗಿರುವ ಪರೀಕ್ಷಾ ಪದ್ಧತಿಯನ್ನು ವಿವರಿಸಿದರು. ಮೊದಲಿಗೆ ಶಿಕ್ಷಕರಾದ ನಾವು ಸಿಲಬಸ್‌ನ್ನು ಓದಿಕೊಂಡು ಹೇಗೆ ಪಾಠ ಮಾಡಬೇಕೆಂಬ ಪೂರ್ವ ಸಿದ್ಧತೆ ಇರಬೇಕು. ಭಾರತದ ಭವಿಷ್ಯ ಶಾಲಾ ಕಟ್ಟಡಗಳಲ್ಲಿ ನಿರ್ಧಾರಿತವಾಗುತ್ತದೆ ಎಂಬುದನ್ನು ಅರಿಯಬೇಕು. ಪ್ರತಿಯೊಬ್ಬರ ಮೆದುಳಿನಲ್ಲಿ 60 ಸಾವಿರ ಟ್ರಿಲಿಯನ್ ಕಣಗಳು ಇದ್ದು. (ಅಂದರೆ 65 ಸಾವಿರ ಲಕ್ಷ ಕೋಟಿ) ಇಷ್ಟೊಂದು ಪದಗಳನ್ನು ಸ್ಮರಣೆಯಲ್ಲಿಟ್ಟಿಕೊಳ್ಳಬಹುದು. ಪ್ರಸಿದ್ಧ ವಿಜ್ಞಾನಿ ನ್ಯೂಟನ್ 3% ಬುದ್ಧಿ ಮಾತ್ರ ಬಳಸಿದ್ದನೆಂದಮೇಲೆ ನಮ್ಮಗಳ ಪಾಡೇನು? ಅರವಿಂದರು ಹೇಳುವಂತೆ ನಾನೇ ಕಲಿಸುತ್ತೇನೆಂಬುದು ಸುಳ್ಳು. ಪ್ರಕೃತಿಯಿಂದಲೂ ಬಹಳಷ್ಟು ವಿಚಾರ ಕಲಿಯಬಲ್ಲ. ಪ್ರಕೃತಿಯೇ ಗುರು, ನಾವು ಶಾಲೆಯಲ್ಲಿ ಕಲಿಸುವುದು ಕಾಲು ಭಾಗ ಶಿಕ್ಷಣ ಮಾತ್ರ ಎಂದು ತಿಳಿಸಿದರು.

ಶ್ರೀ ಎ.ಪಿ. ಗುಂಡಪ್ಪನವರು ಮೌಲ್ಯಮಾಪನದ ಬಗ್ಗೆ ತಿಳಿಸಿದರು. ನಿಮ್ಮ ಮುಂದೆ ವಿಷಯ ಇದೆ. ಅದನ್ನು ಹೇಗೆ ಅಭಿವ್ಯಕ್ತಪಡಿಸಬೇಕೆಂಬುದು ಮುಖ್ಯ. ಇದಕ್ಕಾಗಿ ಪೂರ್ವಸಿದ್ಧತೆ





ಅತ್ಯಾವಶ್ಯಕ, ಮಕ್ಕಳನ್ನು ಪಾಠದ ಕಡೆಗೆ ಗಮನ ಹರಿಸುವಂತೆ ಮಾಡಬೇಕು. ನಮ್ಮ ನಡೆ, ನುಡಿ ಶುದ್ಧವಾಗಿದ್ದು ಮಕ್ಕಳಲ್ಲಿ ಶಿಕ್ಷಕರ ಬಗ್ಗೆ ಒಲವು ಮೂಡಬೇಕು. ಮಕ್ಕಳ ಬಗ್ಗೆ ಶಿಕ್ಷಕರದು ತಾಯಿ ಸ್ಥಾನವೆಂಬುದನ್ನು ಅರಿಯಬೇಕು. ಪ್ರಾರ್ಥನೆ ಮಕ್ಕಳ ಮೇಲೆ ಮಹತ್ವ ಪರಿಣಾಮ ಬೀರುತ್ತದೆ. ಇದರಿಂದ ಏಕಾಗ್ರತೆ ಬರುತ್ತದೆ. Imprint ಆಗಿದ್ದನ್ನು ಅಳಿಸಲು ಸಾಧ್ಯವಾಗುತ್ತದೆ. 'ಮನುಷ್ಯ ಕ್ರೂರಿಯಾಗಿರಬಹುದು, ಮಾನವ ಕರಣಾಮಯಿ' ಎಂದುದನ್ನು ಅರಿತು ಒಳ್ಳೆ ಜೀವನ ನಡೆಸಬೇಕು ಎಂದು ತಿಳಿಸಿದರು.

ಡಾ॥ ಜೆ.ಪಿ. ಬಸವರಾಜುರವರು ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಹೇಗೆ ತಯಾರು ಮಾಡಬೇಕು ಎನ್ನುವುದರ ಕಡೆಗೆ ಗಮನ ಸೆಳೆದರು. ನಾವು ನಮ್ಮ ಅಸ್ತಿತ್ವವನ್ನು ಅರಿಯದ ಹೊರತು ಸಮಾಜ ನಮ್ಮನ್ನು ಒಪ್ಪಿಕೊಳ್ಳುವುದಿಲ್ಲ. ನೀವೇ ಸ್ವತಃ ಪ್ರಶ್ನೆ ಪತ್ರಿಕೆ ತಯಾರು ಮಾಡಿ ಸುಲಭ, ಅತಿ ಸುಲಭ, ಕಠಿಣ ಪ್ರಶ್ನೆಗಳನ್ನು ವಿಭಾಗಿಸಿ, ಮಕ್ಕಳ ಕಲಿಕೆಯ ಮಟ್ಟವನ್ನು ಅರಿತು ಅವರಿಗೆ ಹೆಚ್ಚು ಹೆಚ್ಚು ಗಮನ ಕೊಡಬೇಕು ಎಂದು ತಿಳಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ಇಂದು ಶಿಕ್ಷಕರ ಜವಾಬ್ದಾರಿ ಹೆಚ್ಚಾಗಿದೆ. ಬದಲಾಗುತ್ತಿರುವ ಈ ಜಾಗತೀಕರಣ ವ್ಯವಸ್ಥೆಯಲ್ಲಿ ಮಕ್ಕಳನ್ನು ಗುರಿ ಮುಟ್ಟಿಸುವ ಜವಾಬ್ದಾರಿ ನಿಮ್ಮದು. ಇಂದು ಬಡವ ಶ್ರೀಮಂತರ ಬಗ್ಗೆ ಅಪಾರ ಕಂದಕಉಂಟಾಗಿದೆ. ಶ್ರೀಮಂತಮಕ್ಕಳು ಒಳ್ಳೆಯ ಕಡೆ ಅಭ್ಯಾಸ ಮಾಡುವ ಅವಕಾಶ ಇದೆ. ಆದರೆ ಬಡವರ ಮಕ್ಕಳಿಗೆ ಆ ಸ್ಥಿತಿ ಇಲ್ಲ. ನೀವೆಲ್ಲಾ ಹೆಚ್ಚು ಹಳ್ಳಿಗಾಡಿನಲ್ಲಿ ಸೇವೆ ಸಲ್ಲಿಸುತ್ತಿದ್ದೀರಿ, ಇದನ್ನು ಅರಿತು ಶ್ರಮಿಸಬೇಕು. ಹಳ್ಳಿಯ ಮಕ್ಕಳು ಸ್ಪರ್ಧೆಯಲ್ಲಿ ಪೈಪೋಟಿ ನೀಡುವಂತಾಗಬೇಕು. ನಿಮ್ಮದು ಪವಿತ್ರವಾದ ವೃತ್ತಿ. ನಮ್ಮ ಹಿರಿಯರು ಆಚಾರ್ಯ ಎಂಬ ಪದವಿಯನ್ನು ನೀಡಿದ್ದಾರೆ. ಆಚಾರ್ಯ ಘನೀಭೂತವಾದ ಪಾಂಡಿತ್ಯ ಉಳ್ಳವನಾಗಿದ್ದ, ಸರಳ ಜೀವನದ ಪ್ರತೀಕವಾಗಿದ್ದ ಇದನ್ನು ಅರಿತು ಬಾಳಬೇಕು ಎಂದು ತಿಳಿಸಿದರು.

ಪ್ರಾರಂಭದಲ್ಲಿ ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಪ್ರಾರ್ಥನೆ ಸಲ್ಲಿಸಿದರು. ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಸ್ವಾಗತಿಸಿದರು. ಶ್ರೀ ಟಿ.ಕೆ. ನಂಜುಂಡಪ್ಪನವರು ವಂದನೆ ಸಲ್ಲಿಸಿದರು.

ಎರಡನೇ ಅಧಿವೇಶನ ಕಿರಿಯ ಶ್ರೀಗಳ ಸಾನ್ನಿಧ್ಯದಲ್ಲಿ ನಡೆಯಿತು. ಆಡಳಿತಾತ್ಮಕ ವಿಚಾರಗಳನ್ನು ಚರ್ಚಿಸಲಾಯಿತು.

## ಗಾಂಧೀಜಿ- ಲಾಲ್‌ಬಹದ್ದೂರ್ ಶಾಸ್ತ್ರೀಜಿ ಜಯಂತಿ ಆಚರಣೆ

ಮಹಾತ್ಮ ಗಾಂಧೀಜಿ ಹಾಗೂ ಲಾಲ್‌ಬಹದ್ದೂರ ಶಾಸ್ತ್ರಿಯವರ ಜಯಂತಿಯನ್ನು ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮದ ದಿವ್ಯಸಾನ್ನಿಧ್ಯವನ್ನು ಪರಮಪೂಜ್ಯ ಕಿರಿಯ ಶ್ರೀಗಳು ವಹಿಸಿ ಆಶೀರ್ವಚನ ನೀಡುತ್ತಾ ಮಹಾತ್ಮಾಜಿಯವರ ವ್ಯಕ್ತಿತ್ವವನ್ನು ನಾಲ್ಕು ಜನ ಅಂಧರು ಆನೆಯನ್ನು ಪರಿಚಯ ಮಾಡಿಕೊಂಡಂತಾಗುತ್ತದೆ. ಸಮಾಜಕ್ಕೆ ನಿಮ್ಮ ಸಂದೇಶವೇನು ಎಂದಾಗ ಗಾಂಧೀಜಿಯವರು ನನ್ನ ಜೀವನವೇ ನಿಮಗೆ ಸಂದೇಶ ಎಂದರು. ತಪ್ಪು ಮಾಡದವರು ಯಾರೂ ಇಲ್ಲ, ತಿದ್ದಿಕೊಂಡವರು ಮಹಾತ್ಮರಾಗುತ್ತಾರೆ. ಅವರು ದಕ್ಷಿಣ ಆಫ್ರಿಕಾಕ್ಕೆ ಟ್ರೈನಿನಲ್ಲಿ ಪ್ರಯಾಣ ಬೆಳಸುತ್ತಿದ್ದಾಗ, ಅವರನ್ನು ಮೊದಲನೇ ದರ್ಜೆ ಬೋಗಿಯಿಂದ ಹೊರದಬ್ಬುತ್ತಾರೆ. ಆಗ ಗಾಂಧೀಜಿಯವರಲ್ಲಿ ಸ್ವಾತಂತ್ರ್ಯದ ಬೀಜ ಮೊಳಕೆ ಒಡೆಯಿತು. ಅವರು ಒಂದು ಮಗುವಿನಿಂದಲೂ ಪಾಠಕಲಿಯುತ್ತಿದ್ದರು. ಒಮ್ಮೆ ಒಂದು ಸಮಾರಂಭದಲ್ಲಿ ಸರಳತೆಯ ಬಗ್ಗೆ ಭಾಷಣ ಮಾಡುತ್ತಿದ್ದಾಗ, ಮಗು ಒಂದು ಪ್ರಶ್ನೆ ಕೇಳಿತು. ನಿಮ್ಮ ತಲೆಗೆ ಸುತ್ತಿರುವ ಈ ದಪ್ಪ ಪೇಟ, ಅದರಲ್ಲಿರುವ ಬಟ್ಟೆ, ಇಬ್ಬರಿಗೆ ಮೈಮುಚ್ಚಲು ಆಗುವುದಿಲ್ಲವೇ ಎಂದು. ಅಂದಿನಿಂದ ಗಾಂಧೀಜಿ ಪೇಟ ಸುತ್ತುವುದನ್ನೇ ಬಿಟ್ಟರು. ಅವರ ಜೀವನದಲ್ಲಿ ಹೆಚ್ಚು ಪ್ರಭಾವ ಬೀರಿದವರು ಮೂವರು ಮಹಿಳೆಯರು. ಒಬ್ಬರು ಅವರ ತಾಯಿ ಪುತಲೀಬಾಯಿ, ಮುಂದೆ ಗಾಂಧೀಜಿ ಇಪ್ಪತ್ತೊಂದು ದಿನ ಉಪವಾಸ ಕುಳಿತಿದ್ದು ಈ ತಾಯಿಯ ಪ್ರಭಾವದಿಂದ ಎರಡನೆಯವರು ಅವರ ಪತ್ನಿ ಕಸ್ತೂರಬಾರವರು. ಅವರೂ ಸರಳ ಜೀವನಕ್ಕೆ ಒಪ್ಪಿ ಹೆಗಲಿಗೆ ಹೆಗಲು ಕೊಟ್ಟು ದುಡಿದವರು. ಮತ್ತೊಬ್ಬರು ರಂಭಾ ಎನ್ನುವ ದಾದಿ. ಗಾಂಧೀಜಿಗೆ ಚಿಕ್ಕ ವಯಸ್ಸಿನಲ್ಲಿ ಬಹಳ ಭಯ ಪಡುತ್ತಿದ್ದರು. ಒಂದು ದಿನ ಆಕೆ ನಿನಗೆ ಭಯವಾದಾಗ ರಾಮನಾಮವ ಜಪಿಸು ಎಂದು ಹೇಳಿಕೊಟ್ಟಳು. ಅಂದಿನಿಂದ ಪ್ರಾರಂಭವಾದ ರಾಮನಾಮವನ್ನು ಕೊನೆಯ ಉಸಿರಿರುವವರೆಗೂ ಬಿಡಲಿಲ್ಲ. ಗಾಂಧೀಜಿ ಸ್ವಾತಂತ್ರ್ಯ ದೊರಕಿಸಿಕೊಡುವುದರ ಜೊತೆಗೆ ಅಮೂಲ್ಯವಾದ ಸರ್ವೋದಯ ತತ್ವವನ್ನು ಕೊಟ್ಟಿದ್ದಾರೆ. ಅವರ ಎಲ್ಲಾ ತತ್ವಗಳೂ ಆಧ್ಯಾತ್ಮದ ಪ್ರಭಾವಳಿಯಿಂದ ಬೆಳಗುತ್ತಿವೆ ಎಂದು ನುಡಿದರು. ಶ್ರೀ ಗೋವಿಂದರಾಜುರವರು ಉಪನ್ಯಾಸ ನೀಡಿದರು.

## ವಿಜಯದಶಮಿ ಆಚರಣೆ

ಶ್ರೀಮಠದಲ್ಲಿ ವಿಜಯದಶಮಿಯನ್ನು ಅತ್ಯಂತ ಭಕ್ತಿ, ಸಡಗರ, ಸಂಭ್ರಮಗಳಿಂದ ಆಚರಿಸಲಾಯಿತು. ಅಂದು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯನ್ನು ಪಲ್ಲಕ್ಕಿಯಲ್ಲಿ ಬೆಟ್ಟದ ಮೇಲಿಂದ ಮೆರವಣಿಗೆಯಲ್ಲಿ ತಂದು ಮಹಾನವಮಿ ಮಂಟಪದಲ್ಲಿ ಇರಿಸಲಾಯಿತು. ನಂತರ ಪಟದ ಕುಣಿತ, ಕಂಸಾಳೆ ನೃತ್ಯ, ಅಂಗ ಸಾಧನೆ, ಕೋಲಾಟ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ಈ ವರ್ಷ ಅತಿವೃಷ್ಟಿ-ಅನಾವೃಷ್ಟಿ ಎರಡನ್ನೂ ಕಂಡಿದ್ದೇವೆ.

ಇದಕ್ಕೆಲ್ಲ ಮನುಷ್ಯರಲ್ಲಿ ದೈವ ಭಕ್ತಿ ಕಡಿಮೆ ಆಗುತ್ತಿರುವುದೇ ಕಾರಣವಾಗಿದೆ, ಮಾನವರಲ್ಲಿ ಅಧರ್ಮ ಹೆಚ್ಚಾದಾಗ ಈ ರೀತಿ ಉತ್ಪಾತಗಳು ಆಗುತ್ತವೆಂದು ಪುರಾಣಗಳು ಹೇಳುತ್ತಿವೆ. ಈ ವಿಜಯದಶಮಿಯ ಸಂಕೇತ ನಮ್ಮಲ್ಲಿರುವ ದುಷ್ಟ ಶಕ್ತಿಯನ್ನು ನಾಶ ಮಾಡಿಕೊಂಡು, ಶಿಷ್ಟ ಶಕ್ತಿಯನ್ನು ಉದ್ದೀಪನ ಗೊಳಿಸುವುದೇ ಆಗಿದೆ. ಹಿಂದೆ ರಾಜರು ಇದನ್ನು ವಿಜಯದ ಸಂಕೇತವಾಗಿ ಆಚರಿಸುತ್ತಾ ಬಂದರು. ವಿಜಯನಗರದ ಅರಸರಿಂದ ಪ್ರಾರಂಭವಾಗಿ, ಮೈಸೂರು ಅರಸರು ಅದನ್ನು ಮುಂದುವರೆಸಿಕೊಂಡು ಬಂದು, ತಾಯಿ ಚಾಮುಂಡೇಶ್ವರಿ ಲೋಕಕಂಟಕರಾದ ಮಹಿಷಾಸುರ ಮುಂತಾದ ರಾಕ್ಷಸರನ್ನು ಸಂಹಾರ ಮಾಡುವುದೇ ಆಗಿದೆ, ಈ ದಿನವೇ ಪಾಂಡವರು ಬನ್ನಿಯ ಮರಕ್ಕೆ ಕಟ್ಟಿದ ಆಯುಧಗಳನ್ನು ಕಳಚಿ ಯುದ್ಧಕ್ಕೆ ಸಿದ್ಧರಾದರೆಂಬುದನ್ನು ಮಹಾಭಾರತ ಕಥೆ ತಿಳಿಸುತ್ತದೆ. ಪ್ರತಿಯೊಬ್ಬರು ನೀತಿ ಪರರಾಗಿ ಭಗವಂತನಲ್ಲಿ ಭಕ್ತಿ ಶ್ರದ್ಧೆ ಉಳ್ಳವರಾಗಬೇಕು, ಎಂದು ತಿಳಿಸಿದರು. ಕಿರಿಯ ಶ್ರೀಗಳು ಬೇರೆ ಬೇರೆ ರಾಜ್ಯಗಳಲ್ಲಿ ಈ ಹಬ್ಬವನ್ನು ಹೇಗೆ ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾ ಬಂದಿದ್ದಾರೆಂಬುದನ್ನು ತಿಳಿಸಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಜನಪದರ ಬದುಕಿನಲ್ಲಿ ಈ ಹಬ್ಬದ ಮಹತ್ವವನ್ನು ತಿಳಿಸಿದರು. ನಂತರ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ರಾಜೋಪಚಾರ ನಡೆಯಿತು.

**ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದವರು ಏರ್ಪಡಿಸಿದ್ದ ಬಸವ ಜಯಂತಿ ಮತ್ತು ಗುರುವಂದನಾ ಮಹೋತ್ಸವದ ಸಂಕ್ಷಿಪ್ತ ವರದಿ :**

ಈ ಮಂಗಳಮಯ ಸಮಾರಂಭವನ್ನು ಜ್ಯೋತಿ ಬೆಳಗಿಸುವುದರ ಮುಖೇನ ಉದ್ಘಾಟಿಸಿದ ಬೆಂಗಳೂರು ದೂರದರ್ಶನ ನಿರ್ದೇಶಕರಾದ ಶ್ರೀ ಮಹೇಶ್ ಜೋಷಿಯವರು ಮಾತನಾಡುತ್ತಾ, ಈ ಸಮಾರಂಭದಲ್ಲಿ ಭಾಗವಹಿಸುವುದು ನನ್ನ ಜೀವನದ ಅತ್ಯಂತ ಪುಣ್ಯದಿನ. ಇಂದು ತಾರೀಖು ೮, ಈ ಎಂಟು ಸಂಖ್ಯಾಶಾಸ್ತ್ರದಲ್ಲಿ ಅಪೂರ್ವ ಮಹತ್ವ ಪಡೆದಿದೆ. ಅಷ್ಟ ದಿಕ್ಕುಗಳಿಂದ ಭಕ್ತಾಧಿಗಳನ್ನು ಆಕರ್ಷಿಸುವ ಶ್ರೀಮಠದ ಪುಣ್ಯಮಯ ತಪೋಭೂಮಿ. ಈ ಪೀಠಾಧ್ಯಕ್ಷರು ದಾಸೋಹ–ಕಾಯಕ ಯೋಗಿಗಳಾಗಿ ನಡೆದಾಡುವ ದೇವರೆಂದೇ ಕರೆಯಲ್ಪಡುವವರು.

ಅಲ್ಲಾ–ಅಲ್ಲಮನ ಸಮೀಕರಿಸಿದ ಸಂತ ಶಿಶುನಾಳಷರೀಫರ ಗುರುಗಳಾದ ಗುರು ಗೋವಿಂದಭಟ್ಟರ ಮರಿಮಗನಾಗಿ, ಅವರ ಕೊಂಡಿಯಾಗಿ ನಾನಿಲ್ಲಿಗೆ ಬಂದಿದ್ದೇನೆ. ಪವಾಡಗಳು ಅನೇಕ ರೀತಿಯಲ್ಲಿ ನಡೆಯಬಹುದು ಆದರೆ ನಿಜವಾದ ಪವಾಡ ಸಿದ್ಧಗಂಗೆಯಲ್ಲಿ ನಡೆಯುತ್ತಿದೆ. ಜ್ಞಾನ–ಕ್ರಿಯೆಗಳ ಸಮನ್ವಯ ಗದ್ದುಗೆಯಾಗಿರುವ ಶ್ರೀಮಠದಲ್ಲಿ ಪೂಜ್ಯರು ಹತ್ತು ಸಾವಿರ ಮಕ್ಕಳಿಗೆ ನಿತ್ಯ ದಾಸೋಹ ಮಾಡುವುದು ನಿಜವಾದ ಪವಾಡ. ವಿದೇಶೀಯರು ನನ್ನ ಬಳಿ ಬಂದರೆ ಅವರನ್ನು ಶ್ರೀ ಮಠಕ್ಕೆ ಕರೆತಂದು ಪರಿಚಯಿಸುತ್ತೇನೆ. ನಾವು ಬಸವಾದಿ ಶರಣರನ್ನು ನೋಡಿಲ್ಲ, ಆದರೆ ಈ ಪೂಜ್ಯರ ದರ್ಶನ ಮಾಡಿದರೆ ಎಲ್ಲಾ ಶರಣರನ್ನು ಕಂಡಂತೆ ಭಾಸವಾಗುತ್ತದೆ. ಮಾನವನನ್ನು ಅತಿಮಾನವನನ್ನಾಗಿ ಮಾಡುವ ಶಕ್ತಿ ಗುರುವಿಗಿದೆ. ಪರಮಹಂಸರು ವಿವೇಕಾನಂದರನ್ನು, ಗೋವಿಂದಭಟ್ಟರು ಶಿಶುನಾಳ ಶರೀಫರನ್ನು, ರಾಮದಾಸರು ಶಿವಾಜಿಯನ್ನು, ವಿದ್ಯಾರಣ್ಯರು ಹಕ್ಕಬುಕ್ಕರನ್ನು ಐತಿಹಾಸಿಕ ವ್ಯಕ್ತಿಗಳನ್ನಾಗಿ ಮಾಡಿದಂತೆ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಸಾವಿರಾರು ಮಕ್ಕಳನ್ನು ವ್ಯಕ್ತಿಗಳನ್ನಾಗಿ ನಿರ್ಮಾಣ ಮಾಡಿದ್ದಾರೆ. ಶ್ರೀಮಠಕ್ಕೆ ವಾಜಪೇಯಿಯವರು ಸಮಾರಂಭವೊಂದಕ್ಕೆ ಆಗಮಿಸಿದಾಗ ಜೊತೆಯಲ್ಲಿದ್ದ ಪರಮಪೂಜ್ಯರು ವೇದಿಕೆಯ ಮೆಟ್ಟಿಲನ್ನು ಸಣ್ಣ ಹುಡುಗನಂತೆ ಪಟಪಟನೆ ಹತ್ತಿ ಹೋಗಿದ್ದನ್ನು ಕಂಡು ನಾನು ರೋಗಿಯಾಗಿ, ಭೋಗಿಯಾಗಿ ಬಂದಿದ್ದೇನೆ.





ನೀವು ಮಹಾಯೋಗಿಗಳಾಗಿದ್ದೀರಿ ಎಂದು ಮನತುಂಬಿ ನುಡಿದರು. ಪೂಜ್ಯರು ಶತಮಾನ ಕಂಡ ಶತಾಯುಷಿಗಳಾಗುತ್ತಿದ್ದಾರೆ. ನಾವೆಲ್ಲಾ ಇಂತಹ ಪೂಜ್ಯರ ಕಾಲದಲ್ಲಿ ಬದುಕಿದ್ದೇವೆಂಬುದೇ ಸಂತಸ. ಶತಮಾನೋತ್ಸವದ ಈ ಸಂಭ್ರಮಕ್ಕೆ ನಾವೆಲ್ಲಾ ಭಕ್ತಿ ಗೌರವಗಳಿಂದ ಕಾಯೋಣ ಎಂದು ನುಡಿದರು.

ಮೈಸೂರಿನಿಂದ ಆಗಮಿಸಿದ್ದ ಪ್ರೊ॥ ಎಂ. ಕೃಷ್ಣೇಗೌಡರು ಉಪನ್ಯಾಸ ನೀಡುತ್ತಾ ಇಂದು ನಮ್ಮ ನಮ್ಮ ಲಾಭಕ್ಕೆ ಧರ್ಮದ ಜಿಜ್ಞಾಸೆ ಮಾಡುತ್ತೇವೆ. ಬಸವಣ್ಣನವರನ್ನು ಕುರಿತು ಮಾತನಾಡುವಾಗ ನಮ್ಮ ಎದುರು ಧುತ್ ಎಂದು ನಿಲ್ಲುವ ಪ್ರಶ್ನೆ ಆತ್ಮಸಾಕ್ಷಿ. ಆತ್ಮಸಾಕ್ಷಿಯಾಗಿ ನುಡಿಯುವ ಮಾತು ಮಂತ್ರವಾಗುತ್ತದೆ, ಇಲ್ಲದಿದ್ದರೆ ಬೈಗುಳವಾಗುತ್ತದೆ. ನುಡಿದಂತೆ ನಡೆದರೆ ವಚನ, ಇಲ್ಲದಿದ್ದರೆ ದೇಶಾವರಿ ಮಾತಾಗುತ್ತದೆ. ಬಸವಣ್ಣನವರು 'ಎನ್ನ ಚಿತ್ತ ಹತ್ತಿಯ ಹಣ್ಣು ನೋಡಣ್ಣ, ವಿಚಾರಿಸಿದರೆ ಹುರುಳಿಲ್ಲವಯ್ಯಾ' ಎಂದು ಒಳ ತೋಟಿಯನ್ನು ಪ್ರಶ್ನಿಸುತ್ತಾರೆ. ಜಗತ್ತಿನಲ್ಲಿ ಅತ್ಯಂತ ತೀವ್ರತೆಯುಂಟಾದಾಗ ಕ್ರಾಂತಿಗಳಾಗಿವೆ. ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದಲ್ಲಿ ವೀರಶೈವ ಕ್ರಾಂತಿ ನಡೆಯುವಾಗ ಒಂದು ದೊಡ್ಡ ಭೂಮಿಕೆ ಸಿದ್ಧವಾಗಿತ್ತು. ಹನ್ನೊಂದನೇ ಶತಮಾನದ ಪ್ರಾರಂಭದಲ್ಲಿ ರಾಷ್ಟ್ರಕೂಟರು ದುರ್ಬಲರಾಗಿ ನಂತರದಲ್ಲಿ ಕಲ್ಯಾಣಿ ಚಾಲುಕ್ಯರು ದುರ್ಬಲರಾದರು. ಇದಕ್ಕೆ ಕಾರಣ ರಾಜರುಗಳು ವಿಲಾಸಿ ಜೀವನಕ್ಕೆ ಒಳಗಾಗಿದ್ದು ವಿಪರೀತ ತೆರಿಗೆ ಹಾಕುತ್ತಿದ್ದರು. ಮಗ್ಗದವರ ಮೇಲೆ, ನೂಲಿನ ಕರ ಮನೆಯ ಮುಂದೆ ಚಪ್ಪರ ಹಾಕಿದರೆ, ಮದುವೆಗೆ, ಋತುಮತಿಯಾದರೆ ಹೀಗೆ ಅನೇಕ ಕಾರಣಗಳಿಗೆ ಕರ ತೆರಬೇಕಾಗಿತ್ತು. ವೈದಿಕ, ಜೈನಧರ್ಮದ ತತ್ವಗಳು ಕಂದಾಚಾರಗಳಾಗಿ ಕರ್ಮಠರ ಕೈಯಲ್ಲಿ ಸಿಲುಕಿ, ಸಮಾಜ ಹೊಸ ಆಂದೋಲನಕ್ಕೆ ಕಾಯುತ್ತಿತ್ತು. ಬಸವಣ್ಣನವರು ಈ ಕೆಳವರ್ಗದವರನ್ನೆಲ್ಲಾ ಸಂಘಟಿಸಿದರು. ಸ್ವಾಮಿ ವಿವೇಕಾನಂದರು ಹೇಳುವಂತೆ ಇಡಿಯಷ್ಟಿದ್ದ ಬ್ರಿಟೀಷರು ಈ ಜಗತ್ತಿನ ಅರ್ಧಭಾಗವನ್ನು ಆಳಿದ್ದು ಅವರ ಒಂದೇ ಸಂಕಲ್ಪದಿಂದ, ನಮ್ಮಲ್ಲಿ ಭಿನ್ನತೆ ಇತ್ತು. ಭಾರತದ ಒಂದು ದೊಡ್ಡ ಶಾಪ ನಮ್ಮಲ್ಲಿ ಒಂದು ಸಂಕಲ್ಪವಿಲ್ಲದೆ ಇರುವುದು. ನಮ್ಮಲ್ಲಿ ನೂರೆಂಟು ಜಾತಿ, ಮತ, ವರ್ಗಗಳಿಂದ ಏಕೀಭವಿಸುವುದಿಲ್ಲ. ಆದರೆ ಎಲ್ಲಾ ಜನಗಳ ಆಕಾಂಕ್ಷೆಯನ್ನು ಒಂದೆಡೆ ತಂದವರು ಬಸವಣ್ಣನವರು. ಪ್ರತಿಯೊಬ್ಬರಲ್ಲಿ ಶಿವ ಇದ್ದಾನೆ ಎಂದರೆ ಮೇಲು ಕೀಳು ಎಂಬ ಪ್ರಶ್ನೆಯೇ ಬರುವುದಿಲ್ಲ. ಬಸವಣ್ಣನವರು ತಮ್ಮ ಸರಳತೆಯಿಂದ ಜನರಿಗೆ ಹತ್ತಿರವಾದರು. ಎಲ್ಲಾ ವರ್ಗದವರಿಗೆ ಅಣ್ಣನಾದರು. ಅದ್ವೈತದ ರೀತ್ಯ ಶಿವನ ಒಂದು ಅಂಶ ಎಲ್ಲಾ ಚೈತನ್ಯಗಳಲ್ಲಿಯೂ ಅಡಗಿರುತ್ತದೆ. ರಾಮಕೃಷ್ಣರ ಒಂದು ಕಡೆ ಹೀಗೆ ನಿದರ್ಶನ ಕೊಡುತ್ತಾರೆ. ಒಂದು ಊಜಿಯಲ್ಲಿ ನೀರನ್ನು ತುಂಬಿಕೊಂಡು ಸಮುದ್ರದ ಮಧ್ಯದಲ್ಲಿ ಹೋಗಿ ಅದನ್ನು ಹೊಡೆದರೆ ಅದರಲ್ಲಿದ್ದ ನೀರು ಸಮುದ್ರವನ್ನು ಸೇರಿ ಒಂದೇ ಆಗುವಂತೆ, ಜೀವಾತ್ಮ–ಪರಮಾತ್ಮನೆಡೆಗೆ ಸೇರುವುದೇ ಅದ್ವೈತ. ಇಲ್ಲಿ ಊಜಿ ಶರೀರವಿದ್ದ ಹಾಗೆ. 'ಹಾರುವ ಮೊದಲಾಗಿ ಅಂತ್ಯಜ ಕಡೆಯಾಗಿ ಎಲ್ಲರೂ ಒಂದೇ ಎನ್ನುವ ಮಾತನ್ನು ಸ್ಮರಿಸಬಹುದು. ಧರ್ಮವನ್ನು ಅತ್ಯಂತ ಸರಳೀಕರಿಸಿ ಎಲ್ಲರಿಗೂ ನಿಲುಕುವಂತೆ ಮಾಡಿದ್ದು ಬಸವಣ್ಣನವರ ದೊಡ್ಡ ಸಾಧನೆ. ಇಷ್ಟಲಿಂಗದ ಪರಿಕಲ್ಪನೆಯನ್ನು ತಂದು ಕೊಟ್ಟು ದೇವರು ದೂರದಲ್ಲಿರಬಾರದು ಸದಾಕಾಲ ನಮ್ಮ ಅಂಗದ ಮೇಲೆಯೇ ಇರಬೇಕೆಂಬುದು ಅವರ ಅಭಿಪ್ರಾಯ. ಈ ಲೋಕದೊಳಗೆ ಸಂಸಾರವನ್ನು, ಅಧಿಕಾರವನ್ನು ಹೊಂದಿ ಸಾಧನೆಗಳನ್ನು ಮಾಡಿದವರು ವಿರಳ. ಕಾಯಕ–ದಾಸೋಹದ ಎರಡು ಬೃಹತ್ ಪರಿಕಲ್ಪನೆಯನ್ನು ಕೊಟ್ಟೂ, ಶರೀರವನ್ನು ದಂಡಿಸುವುದರ ಮುಖೇನ ಶಿವಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಕಾಯಕದಲ್ಲಿ ಯಾವುದು ಮೇಲಲ್ಲ, ಕೀಳೂ ಅಲ್ಲ, ಈ ಕಾಯಕ ಅಸಂಗ್ರಹ ತತ್ವವನ್ನು ಹೇಳುತ್ತದೆ. ತನಗೆ ಬೇಕಾದಷ್ಟನ್ನು ಇಟ್ಟುಕೊಂಡು ಉಳಿದದ್ದನ್ನು ದಾಸೋಹಕ್ಕೆ ಸಮರ್ಪಿಸಬೇಕು. ದಾಸೋಹದ ಪರಿಕಲ್ಪನೆ ಭಾರತೀಯ ಧರ್ಮದಲ್ಲಿ ಹೊಸದೇನಲ್ಲ, ಈ ಪರಿಕಲ್ಪನೆ ಹಂಚಿಕೊಂಡು ತಿನ್ನುವುದು, ದಾನ ಪದ್ಧತಿಯಲ್ಲಿ ಕೊಡುವವ ದೊಡ್ಡವ ನಾಗುತ್ತಾನೆ, ತೆಗೆದುಕೊಳ್ಳುವವ ಸಣ್ಣವನಾಗುತ್ತಾನೆ, ಮೃದುವಚನವೇ ಸಕಲ ಜಪಂಗಳಯ್ಯಾ, ಸಕಲ ತಪಂಗಳಯ್ಯಾ ಅಯ್ಯ ಎಂದರೆ ಸ್ವರ್ಗ, ಎಲವೋ ಎಂದರೆ ನರಕ, ಹಾವಿನ ಡೊಂಕು ಹುತ್ತಕ್ಕೆ ಸಸಿವ, ಇತ್ಯಾದಿ ವಚನಗಳಿಂದ ಪ್ರತಿಯೊಬ್ಬರು ಬಸವಣ್ಣನೇ ಆದರು. ಎಲ್ಲಾ ಸಂಕಲ್ಪಗಳು ಏಕೀ ಭವಿಸಿದ್ದ ಕಾಲ ಅದು, ಇಡೀ ವಿಶ್ವಧರ್ಮಕ್ಕೆ ಶರಣರ ಕೊಡುಗೆ ಕಾಯಕ–ದಾಸೋಹ, ವಿಶ್ವಮಟ್ಟದಲ್ಲಿ ಕರ್ನಾಟಕವನ್ನು ಪ್ರತಿನಿಧಿಸುವ ಏಕೈಕ ವ್ಯಕ್ತಿ ಬಸವಣ್ಣನವರು. ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಪ್ರತಿನಿಧಿಯಾಗಿ ಸಾಮಾನ್ಯರಿಂದ ಅಸಮಾನ್ಯರಾಗಿ ಬೆಳೆದರು ನಂತರ ಅವರ ಬಗ್ಗೆ ಎಲ್ಲಾ ಪವಾಡಗಳು ಹುಟ್ಟಿಕೊಂಡವು. ಯಃಕಶ್ಚಿತ್ತಾದವನಿಗೂ ಒಂದು ಭವಿಷ್ಯವಿದೆ, ಪಾಪಿಯೂ ಸಂತನಾಗಬಲ್ಲ ಎಂಬುದನ್ನು ತೋರಿಸಿಕೊಟ್ಟು ಅಸ್ಪೃಶ್ಯವರ್ಗ ವನ್ನು ಉದ್ಧಾರ ಮಾಡಿದವರು ಬಸವಣ್ಣನವರು ಎಂದು ನುಡಿದರು.

ಗದುಗಿನಿಂದ ಆಗಮಿಸಿದ್ದ ಕೀರ್ತನಕಾರರಾದ ಕಲ್ಲಿನಾಥ ಶಾಸ್ತ್ರಿಗಳು ಮಾತನಾಡುತ್ತ, ಸಕಲ ಜೀವಾತ್ಮರಿಗೆ ಲೇಸನ್ನೇ

ಬಯಸುವವ ಶರಣರು, ಅಣುರೇಣು, ತೃಣಕಾಷ್ಠಗಳಲ್ಲಿಯೂ ಭಗವಂತನಿದ್ದಾನೆ. ಆತ ಕೇಡಿಲ್ಲದ, ಸಾವಿಲ್ಲದ, ರೂಹಿಲ್ಲದ ಚಲುವ, ದೇವನೊಬ್ಬ ನಾಮಹಲವು ಎಂದರು ಶರಣರು. ಆದರೆ ಇಂದು ಎಷ್ಟು ದೇವರುಗಳು, ನಾವು ದೇವರ ಸ್ಥಿತಿಗೆ ಏರಲಿಲ್ಲ. ನಮ್ಮ ಸ್ಥಿತಿಗೆ ಆತನನ್ನು ಎಳೆದು ತಂದೆವು. ಕಲ್ಲು ದೇವರು ದೇವರಲ್ಲ, ಮಣ್ಣು ದೇವರು ದೇವರಲ್ಲ, ತನ್ನ ತಾನು ಅರಿದವನೇ ದೇವರು. ಆ ನಿಲುವಿಗೆ ಏರಿದವರು ಶರಣರು, ಹಾಗೂ ಪೂಜ್ಯ ಅಪ್ಪನವರ (ಸ್ವಾಮೀಜಿಯವರು) ಇಂದು ಕಾಯಕತತ್ವ ಅಳವಡಿಸಿಕೊಂಡು ಕೋಟಿ ಕೋಟಿ ಕೈಗಳು ದುಡಿದಿದ್ದರೆ, ಪರದೇಶದವರ ಮುಂದೆ ಕೈಯೊಡ್ಡಿ ಬೇಡ ಬೇಕಾಗಿರಲಿಲ್ಲ ಎಂದು ಸದಾಶಯ ನುಡಿಗಳನ್ನಾಡಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯರು ಆಶೀರ್ವಚನ ನೀಡುತ್ತಾ, ಈ ಸಮಾರಂಭ ಸಾರ್ಥಕವಾಗಬೇಕಾದರೆ ನೀವೆಲ್ಲಾ ಆತ್ಮಾವಲೋಕನ ಮಾಡಿಕೊಳ್ಳಬೇಕು. ನಿಮ್ಮಲ್ಲಿ ಅಲ್ಪ ಪರಿವರ್ತನೆಯಾದರೆ ಸಾಕು. ಇದು ವಿಜ್ಞಾನ -ತಂತ್ರಜ್ಞಾನ ಯುಗ, ಮಹತ್ತರ ಬದಲಾವಣೆಯಾಗಿದೆ. ನಾವು ಎಲ್ಲರಂತೆ ಮುಂದೆ ಬರಬೇಕೆಂಬ ಆಸೆ. ಆದರೆ ಸಾಮಾಜಿಕ ಸ್ಥಿತಿಗತಿ ನೋಡಿದಾಗ ನಿರಾಶೆಯಾಗುತ್ತದೆ. ಭರತಖಂಡ ಧರ್ಮಭೂಮಿ, ಯೋಗಭೂಮಿ, ಸ್ವಾತಂತ್ರ್ಯ ಬಂದಾಗ ಜನಗಳಲ್ಲಿದ್ದ ಭಾವನೆ ಇಂದು ಮಾಯವಾಗುತ್ತಿದೆ. ಬಸವಣ್ಣ ನವರು ಮನೆಯನ್ನು ತ್ಯಜಿಸಿ ಕೂಡಲಸಂಗಮದಲ್ಲಿ ಎಲ್ಲಾ ಶಾಸ್ತ್ರಾಧ್ಯಯನ ಮಾಡಿ ಜ್ಞಾನಾನುಭವ ಪಡೆದುಕೊಂಡು ಸಂಗಮದಲ್ಲಿ ತಮ್ಮನ್ನು ತಾವು ಗೆದ್ದು, ಪರಿಪಕ್ವ ವ್ಯಕ್ತಿಯಾಗಿ, ಸಾಮಾಜಿಕ ಬದಲಾವಣೆಗೆ ತೊಡಗಿದರು. ಇಂದು ಮುಖಂಡತ್ವ, ಪ್ರತಿಭಾಸಂಪನ್ನರಾಗಿ, ಸಾಧಕರಾಗಿ, ಆತ್ಮಾವಲೋಕನ ಮಾಡಿಕೊಳ್ಳಬೇಕು. ಇಂದು ನಮ್ಮ ಮುಖಂಡರು 'ನಾನು ಹೇಳಿದಂಗೆ ಮಾಡು, ನಾನು ಮಾಡಿದ ಹಾಗೆ ಮಾಡಬೇಡ' ಎನ್ನುವ ಅಭಿಪ್ರಾಯ ಉಳ್ಳವರು.

ಬಸವಣ್ಣನವರು "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಎಂದು ಹೇಳಿ ಪ್ರಪಂಚವೆಂಬುದು ಮಾಯೆಯಲ್ಲ, ಮಿಥ್ಯೆಯಲ್ಲವೆಂದು ಬದುಕಿಗೆ ಹೊಸ ಅರ್ಥ ಕೊಟ್ಟರು. ಸಾಧನೆಯಲ್ಲಿ ತೊಡಗಿಸಿಕೊಂಡು ಚಿಂತನ ಶೀಲರಾಗಬೇಕು. ಹೊಟ್ಟೆ ತುಂಬ ಅನ್ನ, ಮೈತುಂಬ ಬಟ್ಟೆ ಬೇಕು. ಇವೆರಡೂ ಸನ್ಯಾಸಿಗೂ ಬೇಕು, ಸಂಸಾರಿಗೂ ಬೇಕು. ಅದಕ್ಕೆ ಮೊದಲು ಬಸವಣ್ಣನವರು ಆರ್ಥಿಕ ಕ್ರಾಂತಿ ಮಾಡಿದರು. ಭಗವಂತ ಕೊಟ್ಟಿರುವ ಶಕ್ತಿಯನ್ನು ಉಪಯೋಗಿಸಿ ಕೊಳ್ಳಬೇಕು, ಸ್ವಾತಂತ್ರ್ಯ ಬಂದ ಮೇಲೆ ಜನ ಸೋಮಾರಿಗಳಾಗುತ್ತಿದ್ದಾರೆ. ಮಹಾತ್ಮಾಜಿಯವರು ಹೇಳಿದಂತೆ 'ಈ ದೇಶದಲ್ಲಿ ಒಬ್ಬನಿಗೆ ಜೀವನ ಸೌಕರ್ಯವಿಲ್ಲದೆ ಹೋದರೆ ಅದು ಪ್ರಜಾರಾಜ್ಯವಲ್ಲ' ಈ ಮಾತನ್ನು ಮುಖಂಡರು ಅರ್ಥಮಾಡಿಕೊಳ್ಳಬೇಕು. ಬಸವಣ್ಣನವರು ಧರ್ಮವೆಂಬುದು ಜೀವನ ಕ್ರಮ. ಅದು ಸಾಮಾನ್ಯರ ಸ್ವತ್ತು. ಅದು ಯಾರೊಬ್ಬರ ಸ್ವತ್ತಲ್ಲ. ಕಾಯಕವೆಂಬುದು ಧರ್ಮದ ಸ್ವತ್ತು. ಎಂದು ಭಿನ್ನ ಭಿನ್ನ ಕಾಯಕ ಮಾಡುವವರಿಗೆ ಪ್ರೋತ್ಸಾಹ ಕೊಟ್ಟರು. ಪ್ರತಿಯೊಂದು ಸಮಾಜಕ್ಕೆ ಅರ್ಪಿತ. ಇದರ ಎರಡನೇ ಮುಖ ಕಾಯಕದಿಂದ ಬಂದ ಫಲ ಸಂಗ್ರಹವಾಗಬಾರದು. ಇಂದು ಸಮಾಜದಲ್ಲಿ ಶೋಷಣೆಯಾಗುತಿದೆ. ಬಡವರ ರಕ್ತ ಹೀರುತ್ತಿದ್ದಾರೆ. ಕೋಟಿ ಕೋಟಿ ದುಡಿದರೂ ಸಮಾಧಾನವಿಲ್ಲ. ಆಯ್ದಕ್ಕಿ ಲಕ್ಕಮ್ಮ ತನ್ನ ಗಂಡ ಕಾಯಕ ಮಾಡದೆ ಅಕ್ಕಿಯ ಗಂಟನ್ನು ಹೊತ್ತು ತಂದಾಗ ಹಿಂದಕ್ಕೆ ಕಳುಹಿಸಿ ಕಾಯಕ ಮಾಡಿಯೇ ತರಬೇಕು, ಇದು ಭಗವಂತನಿಗೆ ಅರ್ಪಿತವಾಗುವುದಿಲ್ಲ ಎನ್ನುತ್ತಾಳೆ. ಅಸಂಗ್ರಹ ವೆಂಬುದು ಶ್ರೇಷ್ಠ ತತ್ವ. ಬಸವಣ್ಣ ಕಾಯಕ ತತ್ವದಿಂದ ಉತ್ಪನ್ನ ಹೆಚ್ಚು ಮಾಡಿದರು. ಸಮಾನತೆ ತಂದರು. ಅದಕ್ಕೆ ಒಂದು ಆಧ್ಯಾತ್ಮದ ಪ್ರಭೆ ತಂದರು. ಅದು ಶಿವನ ಸೇವೆ ಎಂದು ತಿಳಿಯಿರಿ ಎಂದರು. ಬಸವಣ್ಣನವರು ಹೊಲೆಯ ಮಾದಿಗರೆಂಬ ಬಲೆಯ ಕಿತ್ತೆಸೆದು, ಭಗವಂತನ ದೃಷ್ಟಿಯಲ್ಲಿ ಎಲ್ಲರೂ ಸಮಾನರೆಂಬುದನ್ನು ತೋರಿಸಿ ಭೂತಳವನ್ನು ಸ್ವರ್ಗಮಾಡಿದರು ಎಂದು ಆಶೀರ್ವಚನ ನೀಡಿದರು.



ಕಿರಿಯ ಶ್ರೀಗಳು ಬಹುಮಾನ ವಿತರಿಸಿದರು. ತಾಂತ್ರಿಕ ಕಾಲೇಜಿನ ನಿರ್ದೇಶಕರಾದ ಶ್ರೀ ಎಂ.ಎನ್. ಚನ್ನಬಸಪ್ಪ ನವರು ಅಧ್ಯಕ್ಷತೆ ವಹಿಸಿದ್ದರು. ಪ್ರಾಂಶುಪಾಲರಾದ ಶ್ರೀ ಬಸವರಾಜಯ್ಯ ನವರು ನಿವೃತ್ತ ನೌಕರರಿಗೆ ಸನ್ಮಾನ ಮಾಡಿದರು.

ವರದಿ : ಶ್ರೀ ಡಿ.ಎಸ್. ನಾಗರಾಜು





## ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

### ದಾಸೋಹಕ್ಕೊಂದು ಅಪೂರ್ವ ಅವಕಾಶ

ಶ್ರೀಮಠದ ದಾಸೋಹಕ್ಕೆ ಒಂದು ಭವ್ಯ ಪರಂಪರೆ ಇದೆ, ಇತಿಹಾಸ ಇದೆ. ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳಿಂದ ವಿದ್ಯಾಭ್ಯಾಸಕ್ಕೆಂದು ಪ್ರತಿ ವರ್ಷ ನಿರೀಕ್ಷೆಗೂ ಮೀರಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ದಾಖಲಾಗುತ್ತಿದ್ದಾರೆ. ಪ್ರಸ್ತುತ ವಿದ್ಯಾರ್ಥಿಗಳ ಸಂಖ್ಯೆ 8000ಕ್ಕೂ ಮೀರಿದೆ. ಸರ್ವ ಧರ್ಮ ಸಮನ್ವಯಕ್ಕೆ ಉಜ್ವಲ ನಿದರ್ಶನವಗಿರುವ ಶ್ರೀಮಠದಲ್ಲಿ ಜಾತಿ, ಮತ, ವರ್ಗ ಬೇಧವಿಲ್ಲದೆ ಆಶ್ರಯ ನೀಡಲಾಗುತ್ತಿದೆ. ಇದೊಂದು ಪುಟ್ಟ ಭಾರತದಂತಿದೆ. ಅಲ್ಲದೇ ಪ್ರತಿದಿನ ಮಕ್ಕಳ ಪೋಷಕರೂ, ಯಾತ್ರಾರ್ಥಿಗಳೂ, ಭಕ್ತರು, ಅಭಿಮಾನಿಗಳು, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭೇಟಿ ನೀಡುತ್ತಿದ್ದಾರೆ. ಇವರೆಲ್ಲರಿಗೂ ಶ್ರೀಮಠದಲ್ಲಿ ದಾಸೋಹ ನಡೆಯುತ್ತಿದೆ. ಶ್ರೀಮಠಕ್ಕೆ ಹೇಳಿಕೊಳ್ಳುವಂತಹ ಆಸ್ತಿಯಾಗಲೀ, ಆರ್ಥಿಕ ಸಂಪನ್ಮೂಲಗಳಾಗಲೀ ಇಲ್ಲ. ಪರಮಪೂಜ್ಯ ಶ್ರೀ ಶ್ರೀಗಳವರ ತಪೋನಿಷ್ಠೆ, ಆತ್ಮಬಲ ಹಾಗೂ ಭಕ್ತರು, ಅಭಿಮಾನಿಗಳೂ ನೀಡುವ ಸಹಕಾರ, ಸಹಾಯದ ಮೇಲೆ ಈ ದಾಸೋಹ ನಿರಂತರವಾಗಿ ನಡೆದು ಬರುತ್ತಿದೆ. ಪ್ರತಿದಿನ ನಡೆಯುವ ಪವಿತ್ರವಾದ ದಾಸೋಹದ ಸೇವೆಯಲ್ಲಿ ತೊಡಗಿಸಿಕೊಳ್ಳುವ ಅಪೂರ್ವ ಅವಕಾಶವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಅನುಗ್ರಹಿಸಿದ್ದಾರೆ. ಈ ಪವಿತ್ರ ಯೋಜನೆಯಲ್ಲಿ ಯಾರು ಬೇಕಾದರೂ ಪಾಲ್ಗೊಳ್ಳಬಹುದು. ಕನಿಷ್ಠ ೨೦೦೦/-ರೂಗಳಿಗೆ ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ನೀಡಿದರೆ ಇದನ್ನು ಶಾಶ್ವತ ನಿಧಿಯನ್ನಾಗಿ (ಎಫ್.ಡಿ.) ಇಟ್ಟು ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ವಿನಿಯೋಗಿಸಲಾಗುವುದು. ದಾಸೋಹ ನಿಧಿಗೆ ಕೊಡುವ ಹಣಕ್ಕೆ **No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

**ಈ ಮೇಲಿನ ಮನವಿಗೆ ಸ್ಪಂದಿಸಿ ಶ್ರೀ ಮಠದ ಈ ಪುಣ್ಯ ಯೋಜನೆಯ ದಾಸೋಹ ನಿಧಿಗೆ ಅರ್ಪಿಸಿರುವ ಮಹನೀಯರುಗಳು**

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 3716. | ಶ್ರೀ ಟಿ.ಎನ್. ಗಿರೀಶ್, ಉಪನ್ಯಾಸಕರು, ಸಿದ್ಧಗಂಗಾ ಪಾಲಿಟೆಕ್ನಿಕ್, ತುಮಕೂರು. | 6000.00 | 3727. | ಶ್ರೀ ಜಿ. ನಾರಾಯಣಪ್ಪ 'ಡಿ' ಗ್ರೂಫ್ ನೌಕರ ಶ್ರೀ. ಸಿ. ಗ್ರಾ.ಪ್ರೌ.ಶಾ. ಗುಡೇಮಾರನಹಳ್ಳಿ, ಮಾಗಡಿ ತಾ., | 2001.00 |
| 3717. | ಶ್ರೀ ಸಿ.ಕೆ. ಅರ್ಜುನ್, ಇನ್ಸ್ಟ್ರಕ್ಟರ್, ಸಿದ್ಧಗಂಗಾ ಪಾಲಿಟೆಕ್ನಿಕ್, ತುಮಕೂರು. | 4000.00 | 3728. | ಶ್ರೀ ರುದ್ರಗೌಡಶಿವನಗೌಡ ರಾಮನಗೌಡ್ರ ಚಿಕ್ಕಹುಲಿಗೆರೆ, ಸವದತ್ತಿ ತಾ., ಬೆಳಗಾಂ ಜಿಲ್ಲೆ. | 10,000.00 |
| 3718. | ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಆಡಳಿತಾಧಿಕಾರಿಗಳು, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 61,907.00 | 3729. | ಶ್ರೀಮತಿ ನಂಜಮ್ಮ ಕೋಂ ಶ್ರೀ ಸಿದ್ದನಂಜಯ್ಯ ಚಿಕ್ಕಹುಲಿಗೆರೆ, ಸವದತ್ತಿ ತಾ., ಬೆಳಗಾಂ ಜಿಲ್ಲೆ. | 1000.00 |
| 3719. | ಶ್ರೀಮತಿ ಡಿ.ಸಿ. ಉಮಾದೇವಿ, ಕೋಂ, ಡಿ.ಎಂ. ಚಂದ್ರಶೇಖರ್ ನಿ.ನ್ಯಾಯಾಧೀಶರು, ಹೈಗ್ರೌಂಡ್ಸ್, ಬೆಂಗಳೂರು. | 4000.00 | 3730. | ಶ್ರೀ ಎಂ. ಮಿಲ್ಲಣ್ಣ ಸಿ.ಟಿ. ಸಿಟಿ ಸ್ಟ್ರೀಟ್ ಕ್ರಾಸ್, ಬೆಂಗಳೂರು. | 2010.00 |
| 3720. | ಶ್ರೀಮತಿ ಮಾಲಾ ಜಿ. ಶಂಕರ್, ಗಂಗಾಧರ ಶೆಟ್ಟಿ ರಸ್ತೆ, ಬೆಂಗಳೂರು. | 5000.00 | 3731. | ಶ್ರೀಮತಿ ಎನ್. ಜೀಜಾವತಿ ನಾಗರಾಜ್ ಜರ್ನಲಿಸ್ಟ್ ಕಾಲೋನಿ, ಜೆ.ಸಿ. ರಸ್ತೆ, ಬೆಂಗಳೂರು. | 10,001.00 |
| 3721. | ಶ್ರೀಮತಿ ಜ್ಯೋತಿ ಬಿ. ಪಂತ್ ಶ್ರೀ ಸಿ.ಶಿ.ಮ.ವಿ. ಬಿ.ಹೆಚ್.ರಸ್ತೆ, ತುಮಕೂರು. | 4320.00 | 3732. | ಶ್ರೀ ಎಸ್. ಸದಾಶಿವಯ್ಯ ಬಿನ್ ಕೆ.ಹೆಚ್. ಸಿದ್ಧಲಿಂಗಯ್ಯ ಮಾರುತಿನಗರ, ವಾಜರಹಳ್ಳಿ, ನೆಲೆಮಂಗಲ. | 10,001.00 |
| 3722. | ಶ್ರೀ ಕೆ.ಎಸ್. ನಾಗರಾಜಯ್ಯ ಮತ್ತು ಕುಟುಂಬವರ್ಗ ಪೈಪ್‌ಲೈನ್ ರಸ್ತೆ, ವಿಜಯನಗರ, ಬೆಂಗಳೂರು. | 5000.00 | 3733. | ಶ್ರೀ ಹೆಚ್.ಆರ್. ವೇದಾವತಿ ಮತ್ತಿ ಶ್ರೀ ಸಾಂಬಶಿವಯ್ಯ ಬಸವೇಶ್ವರನಗರ 2ನೇ ಸ್ಟೇಜ್, ಬೆಂಗಳೂರು. | 4001.00 |
| 3723. | ಶ್ರೀ ಮರುಳಸಿದ್ಧ ಮತ್ತು ರುದ್ರಾಣಮ್ಮ ಪಿ.ಎಫ್. ಬಡಾವಣೆ, ವಿಜಯನಗರ, ಬೆಂಗಳೂರು. | 1001.00 | 3734. | ಶ್ರೀ ಕೋದಂಡ ಮುನಿಸ್ವಾಮಪ್ಪ ದೊಡ್ಡಸಾಗ್ಗೇನಹಳ್ಳಿ, ದೇವನಹಳ್ಳಿ ತಾ., ಬೆಂ.ಗ್ರಾ. | 12,009.00 |
| 3724. | ಶ್ರೀ ಶಿವಾನಂದಸ್ವಾಮಿ ಮತ್ತು ಗೌರಮ್ಮ ವಿಜಯನಗರ, ಬೆಂಗಳೂರು. | 1001.00 | 3735. | ಶ್ರೀಮತಿ ಸ್ಮಿತಾ ಜಗದೀಶ್ ಮಾರುತಿನಗರ, ವಾಜರಹಳ್ಳಿ, ನೆಲೆಮಂಗಲ. | 10,001.00 |
| 3725. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು, ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 5000.00 | 3736. | ಶ್ರೀ ಆರ್.ಎಸ್. ಹುಚ್ಚಾಚಾರ್ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಸಹಕಾರ ಇಲಾಖೆ, ಬೆಂಗಳೂರು. | 10,000.00 |
| 3726. | ಶ್ರೀಮತಿ ನಂಜಮ್ಮ ಕೋಂ. ಶ್ರೀ ಸಿದ್ಧನಂಜಯ್ಯ ಕೊಟ್ಟಿಗೇನಹಳ್ಳೀ, ತಿಪಟೂರು ತಾಲ್ಲೂಕು., | 1000.00 | | | |

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3737. | ಶ್ರೀ ಡಿ.ಎಂ. ಮಹೇಶ್ ಬಿನ್. ಮೃತ್ಯುಂಜಯ<br>ಸರಸ್ವತಿನಗರ, ವಿಜಯನಗರ, ಬೆಂಗಳೂರು. | 1000.00 |
| 3738. | ಶ್ರೀ ಪಿ.ಡಿ. ಗುರಪ್ಪಗೌಡ, ಉಂಬಳಗೋಡು ಎಸ್ಟೇಟ್,<br>ಬೇಲೂರು ತಾ., ಹಾಸನ ಜಿಲ್ಲೆ. | 5005.00 |
| 3739. | ಶ್ರೀ ಅಪ್ಪಣ್ಣಪ್ಪ<br>ಮಹಾಲಕ್ಷ್ಮಿ ಪುರಂ, ಬೆಂಗಳೂರು. | 5000.00 |
| 3740. | ಶ್ರೀ ನಾಗಪ್ಪ ಬಿನ್ ಕೆ. ವೀರಪ್ಪ<br>ಎಂ. ಕಲ್ಲಹಳ್ಳಿ ಅಂ., ಹೂವಿನಹಡಗಲಿ ತಾ., ಬಳ್ಳಾರಿ ಜಿ. | 1001.00 |
| 3741. | ಶ್ರೀ ಕೆ.ಎಸ್. ಶಿವರುದ್ರಯ್ಯ,<br>ನಾಗರಭಾವಿ 2ನೇ ಬ್ಲಾಕ್, ಬೆಂಗಳೂರು. | 1006.00 |
| 3742. | ಶ್ರೀ ಕೆ.ಕೆ. ಸಿದ್ಧಲಿಂಗಯ್ಯ ಮತ್ತು ಶ್ರೀಮತಿ ಆರ್.ಎಸ್.<br>ಶಿವರುದ್ರಾಂಬಿಕ, 14ನೇ ಕ್ರಾಸ್, ಎಸ್.ಎಸ್. ಪುರಂ.<br>ತುಮಕೂರು. | 1001.00 |
| 3743. | ಶ್ರೀಮತಿ ವೆಂಕಟೇಶಮ್ಮ,<br>ಮಂಜುನಾಥನಗರ, ಬೆಂಗಳೂರು. | 1025.00 |
| 3744. | ಶ್ರೀ ಕುಮಾರಸ್ವಾಮಿ, ನಿ.ಶಿಕ್ಷಕರು, ಜೆ.ಸಿ.ಪುರ ಅಂ.,<br>ಚಿಕ್ಕನಾಯ್ಕನಹಳ್ಳಿ, ತುಮಕೂರು ತಾಲ್ಲೂಕು. | 5001.00 |
| 3745. | ಶ್ರೀಮತಿ ಹೇಮಲತ ಎನ್. ಪಾಟೀಲ್<br>ಶೆಟ್ಟಿಹಳ್ಳಿ ಮುಖ್ಯರಸ್ತೆ, ಜಯನಗರ, ತುಮಕೂರು. | 1000.00 |
| 3746. | ಶ್ರೀ ಬಿ.ಎನ್. ಶ್ರೀನಿವಾಸ, ಎಸ್.ಐ. ವರ್ತೂರು ಪೋಲೀಸ್<br>ಠಾಣೆ, ಬೆಂಗಳೂರು ಪಶ್ಚಿಮ, ಬೆಂಗಳೂರು. | 1000.00 |
| 3747. | ಶ್ರೀಮತಿ ಜಯಮ್ಮ ಮತ್ತು ಬಸವಯ್ಯ<br>ಶ್ರೀರಂಗಪಟ್ಟಣ ಅಟ್ ಅಂಡ್ ಪೋಸ್ಟ್,<br>ಶ್ರೀರಂಗ ಪಟ್ಟಣ ತಾಲ್ಲೂಕ್, ಮಂಡ್ಯ ಜಿಲ್ಲೆ. | 50,000.00 |
| 3748. | ಶ್ರೀ ಹೆಚ್.ಎಸ್. ಶಿವನಂಜಪ್ಪ<br>ಹೆಸರಘಟ್ಟ ಮುಖ್ಯರಸ್ತೆ, ಬೆಂಗಳೂರು. | 5001.00 |
| 3749. | ಶ್ರೀಮತಿ ಈರಮ್ಮ ಮತ್ತು ಶ್ರೀ ಎ.ಸಿ. ಸಂಜೀವಯ್ಯ<br>ಬೆಳಗುಂಬ ಅಟ್ ಅಂಡ್ ಪೋಸ್ಟ್, ತುಮಕೂರು | 2001.00 |
| 3750. | ಶ್ರೀ ಜಿ.ಎಂ. ಸಿದ್ಧರಾಮಯ್ಯ<br>ಎಸ್.ಎಸ್. ಅಲ್ಯುಮಿನಿಯಂ ಪ್ಯಾಬ್ರಿಕೇಟರ್ಸ್<br>16ನೇ ಕ್ರಾಸ್, ಎಸ್.ಎಸ್. ಪುರಂ, ತುಮಕೂರು. | 1001.00 |
| 3751. | ಶ್ರೀ ಮರಡಿ ಧರ್ಮಪ್ಪ, ವ್ಯವಸಾಯಗಾರರು,<br>ಉಳವತ್ತಿ ಮತ್ತು ಅಂಚೆ,<br>ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ. | 1001.00 |
| 3752. | ಶ್ರೀ ಬಿ. ಜಯಂತ್,<br>ಆರ್.ಪಿ.ಸಿ. ಲೇಔಟ್,<br>ವಿಜಯನಗರ, ಬೆಂಗಳೂರು. | 4002.00 |
| 3753. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಕೇರಾಫ್ ಬಿ.ಎಂ.ಹೇಮಲತ<br>ಉಪನ್ಯಾಸಕರು, ಶ್ರೀ.ವಿ. ಪ.ಪೂ.ಕಾಲೇಜು,<br>ನಿಟ್ಟೂರು. | 8500.00 |
| 3754. | ಶ್ರೀ ಪಿ.ಬಿ. ಸತೀಶ್‌ಬಾಬು, ಕೇರಾಫ್ ಬಿ.ಎಂ.ಹೇಮಲತ<br>ಉಪನ್ಯಾಸಕರು, ಶ್ರೀ.ವಿ. ಪ.ಪೂ.ಕಾಲೇಜು,<br>ನಿಟ್ಟೂರು. | 5000.00 |

(ಮುಂದುವರಿಯುತ್ತದೆ)

## ವಚನಾಮೃತ (ನೀತಿಪಥ)

– ಬಿ.ಎನ್. ತೇಜಸ್ವಿನಿ ಅರಸ್ (ತೇಜ ನಿನದ) ಬೆಂಗಳೂರು.

ಒಪ್ಪಿಗಿಲ್ಲದ ಮನಕೆ ಒಡ್ಯಾಣವನೆ ಕಟ್ಟಿ
ಕಪ್ಪ ಕಾಲುಂಗರದ ಒಪ್ಪಂದ ಒಡ್ಡಿದಡೆ
ವಿಪ್ಪತ್ತು ಕೊಂಬಂತೆ ; ಒಪ್ಪತ್ತು ಉಂಬಂತೆ ॥

ಮಾತಿನ ಜಾರನ ಕೈಲಿ ; ಮಾತು ಮೈಲಿಗೆಯಾಯ್ತು
ಮಾತಿನ ಚತುರನ ಕೈಲಿ ; ಮಾತು ಮೈಲಿಗಲ್ಲಾಯ್ತು
ಮಾತೇ ಕಾರುಣಿಕ ; ಮಾತೆ ಕಾಲಕೂಟವು ಕೇಳಾ

ಅಣು 'ಅಹಂ' ತಾಬೆರೆತು
ತೃಣಮಾಡಿತದು ಅರಿವ ಪರಿಮಳವನ್ನೆ
ವ್ರಣವನೆ ಬೇರಲ್ಲವದು ಅಹಂತೆಯ ನೆರಳು ಕೇಳಾ ।

ಕೆಟ್ಟು ಬರಬೇಡ ತೌವರಿಗೆಲೆ ತಂಗಿ
ಅಣ್ಣತಮ್ಮಗಳೆಲ್ಲ ತೊನ್ನು ತುರಿಕೆಗಳಾಗಿ
ಅನ್ನವೇ ವಿಷವಾಗಿ ಪಾಶಗೊಂಬುದು ನಿನ್ನ ॥

ಆದರ್ಶವೆಂಬುದಕೆ ಅಳಿವೆಂಬುದೇ ಇಲ್ಲ
ಅಳಿವಿನಲಿ ಆದರ್ಶ ತಾ ಬೆರೆವುದಿಲ್ಲ
ಆದರ್ಶದಲಿ ಅಳಿವು ಮೆರೆವುದದು ತಾ ಕೇಳ ॥

ಕಳ್ಳಿ ಹಾಲದು ಕುಡಿಯೆ ಪಾಷಾಣ
ಮಳ್ಳಿ ಒಲವದು ನೆಚ್ಚೆ ಪಾಷಾಣ
ಸುಳ್ಳಿನಾ ನೆರಳದುವು ಎಲ್ಲಕ್ಕೂ ಪಾಷಾಣ

ರೂಪ–ಯೌವನದ ಮದವೇರಿ
ಸಿರಿಸಾರಿ ಬೆನ್ನೇರಿ
ಕೀರ್ತಿ ತಾ ತಲಗೇರೆ,
ಕ್ಷಣ ಭಂಗುರಕೆ ದಾರಿ !

ಕ್ಷಿತಿಯಮೇಲಸುರತ್ವ ಕ್ಷಾತ್ರದಲಿ ಮೆರೆದಡೇ
ಕ್ಷೋಭೆ – ಕ್ಷಾಮ – ಡಾಮರವಲ್ತೇ ?
ಕ್ಷಮೆ – ದಮೆ ಈರ್ವರಿದ್ದೆಡೆ
ಕ್ಷೇಮವಲ್ತೇ.... ಮತ್ತೇನ ಕಂಡಿರಯ್ಯ ?

ಸುಖವಿಲ್ಲ ಕೇಳಾ ಪರನಿಂದೆ ವ್ಯಾಧಿಯದು
ಸವಕಲುಳಿ ಮಾಡಿ ನೇಪಥ್ಯಕೇ ದೂಡಿ
ಗಹಗಹಿಸಿ ನಗುವುದದು ನೆಲಸಮವ ಮಾಡಿ ॥
ನಿರ್ವಾಣವೆತ್ತಣದು ದೋಷಪೂರಿತ ದಿಶೆಗೆ ?




ಸಾಗರನಹಳ್ಳಿಯಲ್ಲಿ ಸೆಪ್ಟೆಂಬರ್ ೧೩ರಂದು ನಡೆದ ಲಿಂ. ಸಾಗರನಹಳ್ಳಿ ರೇವಣ್ಣನವರ ದ್ವಿತೀಯ ವಾರ್ಷಿಕ ಸಂಸ್ಮರಣೆ ಹಾಗೂ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಸಚಿವ ಶ್ರೀ ರಾಮಚಂದ್ರೇಗೌಡ ಅವರು ಉದ್ಘಾಟಿಸಿದರು. ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಅವರು ಉಪಸ್ಥಿತರಿದ್ದರು.



ಚಿಕ್ಕತೊಟ್ಲುಕೆರೆಯ ಶ್ರೀ ಅಟವಿ ಶಿವಯೋಗಿಗಳ ಕ್ಯಾಸೆಟ್–ಸಿಡಿಯನ್ನು ಶ್ರೀಮಠಕ್ಕೆ ಅರ್ಪಿಸುವ ಸಮಾರಂಭ ಸೆಪ್ಟೆಂಬರ್ ೮ರಂದು ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ವೇದಿಕೆಯಲ್ಲಿ ಹರಗುರು ಚರಮೂರ್ತಿಗಳು, ಐಜಿಪಿ ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ವೈಶ್ಯ ಕೋ ಆಪರೇಟಿವ್ ಬ್ಯಾಂಕಿನ ಆಡಳಿತ ಕಛೇರಿಯ ಪ್ರಾರಂಭೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಬ್ಯಾಂಕಿನ ಆಡಳಿತ ಮಂಡಳಿ ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ನಡೆದ ಶಾರದಾ ಪೂಜಾ ಸಂದರ್ಭದಲ್ಲಿ ನಡೆದ ಸಂಸ್ಥೆಯ ಶಿಕ್ಷಕರ ಸಮ್ಮೇಳನ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಡಾ|| ಎ.ಆರ್. ಸೀತಾರಾಮ್ ಅವರು ಮಾತನಾಡುತ್ತಿರುವುದು. ವೇದಿಕೆಯಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರೊ|| ಎ.ಪಿ. ಗುಂಡಪ್ಪ, ಪ್ರೊ|| ಜಿ.ಎಸ್. ಮುಡಂಬಡಿತ್ತಾಯ, ಡಾ|| ಜಿ.ಪಿ. ಬಸವರಾಜ್ ಅವರು ಉಪಸ್ಥಿತರಿದ್ದರು.



ಕರ್ನಾಟಕ ಪ್ರತಿಭಾ ಅಕಾಡೆಮಿ ಸೆಪ್ಟೆಂಬರ್ ೯ರಂದು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಶಿಕ್ಷಕರ ದಿನಾಚರಣೆ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹಿರಿಯ ಪತ್ರಕರ್ತರಾದ ಡಾ|| ಪಾಟೀಲ ಪುಟ್ಟಪ್ಪ ಶ್ರೀ ಜಿ. ನಾರಾಯಣ, ವಿಮರ್ಶಕ ಪ್ರೊ|| ಎಲ್.ಎಸ್.ಶೇಷಗಿರಿ ರಾವ್ ಮೊದಲಾದವರು ಉಪಸ್ಥಿತರಿದ್ದರು.



ತುಮಕೂರು ಜಿಲ್ಲೆ ಮಧುಮೇಹ ಸಂಘ ಹಾಗೂ ವೀರಶೈವ ಸಂಘಟನೆಗಳ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ಮಧುಮೇಹ ಉಚಿತ ತಪಾಸಣಾ ಶಿಬಿರವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಧುಮೇಹ ಸಂಘ ಹಾಗೂ ವೀರಶೈವ ಸಂಘಟನೆಗಳ ಪದಾಧಿಕಾರಿಗಳು ಉಪಸ್ಥಿತರಿದ್ದರು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 2360408